## ೧೩. ಬ್ರಾಹ್ಮಣನ ಭಕ್ತಿಪರೀಕ್ಷೆ.

ಒಂದು ಊರಲ್ಲಿ ಒಬ್ಬ ವೈದಿಕ ಬ್ರಾಹ್ಮಣನಿದ್ದನು. ಊರೊಳಗಿನ ಗೌ ಗರಿಗೆಲ್ಲ ಅವನೇ ಪುರೋಹಿತನು ಅವರ ಶುಭಾಶುಭ ಕಾರ್ಯಗಳನ್ನೆಲ್ಲ ಆ ಪುರೋ ಹಿತನೇ ಮಾಡಿಸುವನು. ಆದುದರಿಂದ ಅವರಿಗೆ ಆತನಲ್ಲಿ ಅಚಲವಾದ ಶ್ರದ್ಧೆಯಿ ದ್ದಿತು;-ಅವನು ತೋರಿಸಿದ್ದೇ ಹೆದ್ದಾರಿ. ಅವನು ಹೇಳಿದ್ದೇ ಬ್ರಹ್ಮವಾಕ್ಯ.

ಪುರೋಹಿತನ ಮನೆಗೆ ಒಬ್ಬ ಗೌಳಿಗಿತ್ತಿಯು ದಿನಾಲು ಹಾಲು ತಂದ ಕೊಡುತ್ತಿದ್ದಳು. ಅವಳು ಹಾಲು ತರುವದಕ್ಕೆ ತುಸು ತಡವಾಗುವದನ್ನು ನೋಡಿ ಒಮ್ಮೆ ಬ್ರಾಹ್ಮಣನು ಸಿಟ್ಟಿಗೆದ್ದು ನೀನು ಹೀಗೆ ತಡಮಾಡಿ ಹಾಲು ತರುವದಾದರ ನಮಗೆ ನಿನ್ನ ಹಾಲೇ ಬೇಡ. ಮನೆಯಲ್ಲಿ ಚಿಕ್ಕಕೂಸು ಅತ್ತು ಅತ್ತು ಹಣ್ಣಾಗುತ್ತಿದೆ ನೀನು ಸೂರ್ಯೋದಯವಾಗುವದರೊಳಗಾಗಿ ಹಾಲು ತಂದು ಕೊಡುವಂತಿದ್ದರೆ ಸರಿ. ಇಲ್ಲವಾದರೆ ನಾವು ಬೇರೆ ಕಡೆಗೆ ನೋಡಿಕೊಳ್ಳುವೆವು. ಎಂದು ಬೆದರಿಸಿದನು.

ಪುರೋಹಿತನು ಕೋಪಗೊಂಡದ್ದನ್ನು ನೋಡಿ ಗೌಳಿಗಿತ್ತಿಯು ಅಂಜಿದ ಳು. ಅವಳು ಸ್ವಾಮಿ, ಏನು ಮಾಡಲಿ? ಏಳೆಂಟು ದಿನಗಳಿಂದಲೂ ಸ್ವಲ್ಪ ತ ವಾಗುತ್ತದೆ. ಗಂಗೆಯಲ್ಲಿ ನೀರು ತುಂಬಿರುವದು. ನಾವಿಕರು ನನ್ನನ್ನು ಬೇಗನೆ ದಾಟಿಸುತ್ತಿರುವದಿಲ್ಲ. ನಿನಗೊಬ್ಬಳಿಗಾಗಿಯೇ ನಾವೇಕೆ ದೋಣಿಯನ್ನು ಬಿಡೊ ಣ? ನೀನೇನು ನಾಲ್ಕಾಣೆ ಕೊಡುವೆಯಾ? ಕೊಡುವದು ಮೂರು ಕಾಸು (ಒ ದು ದುಡ್ಡು.) ಇಷ್ಟಕ್ಕಾಗಿ ನಾವೇಕೆ ಕಷ್ಟಪಡಬೇಕು. ಇನ್ನೂ ನಾಲ್ಕಾರು ದಾ ಟಾದರು ಬರಲಿ, ಎನ್ನುತ್ತಿದ್ದಾರೆ. ಆದುದರಿಂದ ನನಗೆ ತಡವಾಗುವದು. ನದಿಯ ನ್ನು ದಾಟಿ ಬರುವದು ನನ್ನ ಕೈಯಲ್ಲಿರುವದೇ? ಎಂದು ಬಿನ್ನವಿಸಿಕೊಂಡಳು.

ಪುರೋಹಿತನು ತನ್ನ ಆಡಂಬರದ ನಡತೆಗನುಸಾರವಾಗಿ “ಇದಕ್ಕೇಕೆ ಷ್ಟೊಂದು ಯೋಚನೆ? ಭಕ್ತಿಪೂರ್ವಕವಾಗಿ ಭಗವಂತನ ನಾಮಸ್ಮರಣೆ ಮಾ ತ್ತ ನಡೆದರೆ ಗಂಗೆಯು ಕೂಡ ತನ್ನ ಒಡಲಲ್ಲಿ ದಾರಿಯನ್ನು ಕೊಟ್ಟು ಬಿಡುವಳ ಆ ನಾವಿಕರ ಗೊಡವೆ ಸಲುವಾಗಿ ನೀನು ಚಿಂತಿಸಲೇಕೆ? ಎಂದು ಗೌಳಿಗಿತ್ತಿಗೆ ಉ ದೇಶ ಮಾಡಿದನು. ಕೇವಲ ಶಾಬ್ದಿಕ ಭಕ್ತಿಯನ್ನು ಬೋಧಿಸುವ ಪುರೋಹಿತ ಅಂತರಂಗವನ್ನು ಅರಿಯದ ಅವಳಲ್ಲಿ ಭಗವಂತನ ಅಗಾಧ ಮಹಿಮೆಯಲ್ಲಿ ಅತ್ಯ ತ ಶ್ರದ್ಧೆಯುಳ್ಳ ಗೌಳಿಗಿತ್ತಿಯು ಪುರೋಹಿತನ ಮಾತನ್ನು ನಂಬಿ, ಸ್ವಾಮಿ, ದ ಗಿದ್ದೇ ಆಗಲಿ, ನಾಳೆಯಿಂದ ನಾವಾಡಿಗರ ದಾರಿಯನ್ನು ನೋಡದೆ ಭಗವಂತ

ಕರುಣೆಯಿಂದ ಗಂಗೆಯನ್ನು ದಾಟಿತಮಗೆಸೂರ್ಯೋದಯವಾಗುವದಕ್ಕಿಂತಲೂ ಮೊದಲೇ ಹಾಲನ್ನು ತಂದು ಕೊಡುವೆನು. ಎಂದು ನುಡಿದು ಮನೆಗೆ ನಡೆದಳು.

ಮಾರನೆಯ ದಿನದಿಂದ ಗೌಳಿಗಿತ್ತಿಯು ಸೂರ್ಯೋದಯವಾಗುವದಕ್ಕಿಂತ ಮೊದಲೇ ಪುರೋಹಿತನ ಮನೆಗೆ ಹಾಲು ತಂದುಕೊಡಹತ್ತಿದ್ದಳು. ಹೀಗೆಯೇ ಕೆಲವು ದಿನಗಳು ಕಳೆಯಲು ಮತ್ತೊಮ್ಮೆ ಪುರೋಹಿತನು ಏನಮ್ಮಾ, ನೀನು ಈಗ ಹೊತ್ತಿಗೆ ಸರಿಯಾಗಿ ಹಾಲು ತಂದುಕೊಡುತ್ತಿರುವೆ! ಮೊದಲು ನಾವಾಡಿಗರ ನೆವ ಹೇಳಿ, ನಮ್ಮ ಹಸುಗೂಸನ್ನು ಹಸಿವೆಯಿಂದ ಬಳಲಿಸುತ್ತಿದ್ದೆಯಲ್ಲವೆ? ಎಂದನು.

ಗೌಳಿಗಿತ್ತಿ ತಾವು ಉಪದೇಶಿಸಿದ ಭಗವನ್ನಾಮಸ್ಮರಣೆಯ ಬಲದಿಂದ ಗಂಗೆಯನ್ನುದಾಟಿ ಬರುತ್ತಿರುವೆನೆಂದು ಬಿನ್ನವಿಸಿಕೊಂಡಳು.

ಪುರೋಹಿತನಿಗೆ ಆ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ. ಅವನು ಗೌಳಿಗಿತ್ತಿಯೊಡನೆ ಗಂಗಾತೀರಕ್ಕೆ ಬಂದನು. ಗೌಳಿಗಿತ್ತಿಯು ಎಂದಿನಂತೆ ಭಗವಂತನನ್ನು ಸ್ಮರಿಸುತ್ತ ನದಿಯ ಜಲದಲ್ಲಿ ಶಿಲೆಯ ಮೇಲೆ ನಡೆಯುವಂತೆ ನಡೆಯ ತೊಡಗಿದಳು. ಅದನ್ನು ನೋಡಿ ಪುರೋಹಿತನು ಆಶ್ಚರ್ಯದಿಂದ ತಾನೂ ಗಟ್ಟಿಯಾಗಿ ನಾರಾಯಣ, ನಾರಾಯಣ ಎಂದು ಒದರುತ್ತ ನದಿಯಲ್ಲಿ ಇಳಿದನು. ಮುಂದೆ ಹೋಗುತ್ತಿರುವ ಗೌಳಿಗಿತ್ತಿಯು ತಿರುಗಿ ನೋಡಿ ಸ್ವಾಮೀ, ತಮಗೆ ಭಗವಂತನ ಮಹಿಮೆಯಲ್ಲಿ ವಿಶ್ವಾಸವಿರುವಂತೆ ತೋರುವದಿಲ್ಲ. ಧೋತರವನ್ನೇಕೆ ಏರಿಸಿ ಹಿಡಿದಿರುವಿರಿ! ತುಂಬಿದ ಗಂಗೆಯ ಒಡಲಲ್ಲಿ ದಾರಿಯನ್ನು ಕೊಡಿಸುವ ಭಗವಂತನು ನಿಮ್ಮ ಧೋತರವು ತೊಯ್ಯದಂತೆ ಮಾಡಲಾರನೇ! ಎಂದಳು ಹಾಲು ಮಾರಿ ಹೊಟ್ಟೆತುಂಬಿಕೊಳ್ಳುವ ನಿನಗೆ ನಾಮಸ್ಮರಣೆಯ ಮಹಿಮೆ ಏನುಗೊತ್ತು! ಭಗವಂತನ ಧ್ಯಾನದಲ್ಲಿಯೇ ಮುಪ್ಪಾದ ನನಗೆ ನೀನು ಉಪದೇಶ ಮಾಡುವಿಯಾ! ಎಂದು ಜಂಬದ ಮಾತಾಡುತ್ತ ಪುರೋಹಿತನು ಮತ್ತೆರಡುಹೆಜ್ಜೆ ಮುಂದೆ ಹೋಗುವಷ್ಟರಲ್ಲಿ ದೊಡ್ಡ ಪ್ರವಾಹದಲ್ಲಿ ಬಿದ್ದು ಮುಳುಗೇಳುತ್ತ ತೇಲಿಹೋದನು. ಗೌಳಿಗಿತ್ತಿಯು ಇದನ್ನು ನೋಡಿ ಹರಿನಾಮಸ್ಮರಣೆ ಮಾಡುತ್ತ ಹಿಡಿಬಂದು ಬ್ರಾಹ್ಮಣನ ಚಂಡಿಕೆಯನ್ನು ಹಿಡಿದು ಎಳೆದು ತಂದು ದಂಡೆಗೆ ಮುಟ್ಟಿಸಿದಳು. ಬ್ರಾಹ್ಮಣನ ಭಕ್ತಿಪರೀಕ್ಷೆ ಯಾದಂತಾಯಿತು

ಸಾಂ ॥ ಹರಿನಾಮ ಸ್ಮರಣೆಯ ಮಹಿಮೆಯ ನಂಬಿರ್ದ । ವರಸಾಧ್ವಿಗೋಪಿ ಗಂಗೆಯಲಿ ॥
ಹರುಷದೊಳ್ ನಡೆದಿರಲು ನಿಜಭಕ್ತಿಯನ್ನುಳಿದ । ವರವಿಪ್ರ ಮುಳುಗಿ ಸಾಯುವನು ॥

## ೧೫. ಆತ್ಮಜ್ಞಾನಿಯಾದ ವ್ಯಾಸನು.

ಒಂದು ದಿನ ಆತ್ಮಜ್ಞಾನಿಯಾದ ವ್ಯಾಸನು ಯಮುನಾತೀರದಲ್ಲಿ ಸಂಚ ಸುತ್ತಲಿದ್ದನು. ಆಗ ಅಲ್ಲಿ ಕೆಲವು ಗೋಪಿಯರು ಹಾಲು ಮೊಸರುಗಳ ಗಡಿಗೆ ಳನ್ನು ಬುಟ್ಟಿಯಲ್ಲಿಟ್ಟುಕೊಂಡು ಮಾರಲಿಕ್ಕೆ ಹೋಗುತ್ತಿದ್ದರು. ಅವರಿಗೆ ನ ಯನ್ನು ದಾಟಬೇಕಾಗಿತ್ತು. ಮಹಾಪೂರದಿಂದ ನದಿಯು ಎರಡೂ ದಂಡೆಗಳ ತುಂಬಿ ಹರಿಯುತ್ತಿದ್ದುದರಿಂದ ಸಣ್ಣಪುಟ್ಟ ಡೋಣಿಗಳು ಓಡಾಡುವಂತಿರಲಿಲ್ಲ ಆಗ ಅವರು ವ್ಯಾಸಮುನಿಯ ಬಳಿಗೆ ಹೋಗಿ ನದಿಯನ್ನು ದಾಟುವ ಉಪಾ ವನ್ನು ಹೇಳೆಂದು ಕೇಳಿಕೊಂಡರು.

ಗೋಪಿಯರ ಮಾತನ್ನು ಕೇಳಿ ವ್ಯಾಸನು—“ನಿಮ್ಮನ್ನು ನದಿಯನ ದಾಟಿಸುವ ಭಾರವು ನನಗೆ ಕೂಡಿತು. ಆದರೆ ನಾನು ಈಗ ಹಸಿವೆಯಿಂದ ಕಂ ಟ್ಟಿರುವೆನು. ಎರಡು ಮೂರು ದಿನಗಳಿಂದಲೂ ಊಟವೇ ದೊರೆಯಲಿಲ್ಲ. ಆದ ದರಿಂದ ನೀವೆಲ್ಲರೂ ಕೂಡಿ ನನ್ನ ಹೊಟ್ಟೆ ತುಂಬುವಷ್ಟು ಹಾಲು ಬೆಣ್ಣೆ ಮೊ ರುಗಳನ್ನು ಕೊಟ್ಟರೆ ನಾನು ನಿಮ್ಮೆಲ್ಲರನ್ನು ನಿರಾಯಾಸವಾಗಿ ನದಿಯನ್ನು ದಾ ಸುವೆನು” ಎಂದನು. ಗೋಪಿಯರು ವ್ಯಾಸನ ಮಾತನ್ನು ಸಮ್ಮತಿಸಿದರು. ಅ ರು ಬುಟ್ಟಿಯನ್ನಿಳುಹಿ ಅವನಿಗೆ ಸಾಕುಸಾಕೆನ್ನುವಷ್ಟು ಹಾಲುಮೊಸರುಗಳನ್ನು ಬೆಣ್ಣೆಯನ್ನೂ ಕೊಟ್ಟರು. ವ್ಯಾಸನು ಅವನ್ನೆಲ್ಲ ತಿಂದು “ಡರ್ರೆಂದು ತೇಗು ನದಿಗೆ ಹೋಗಿ ಕೈಬಾಯಿಗಳನ್ನು ತೊಳೆದುಕೊಂಡು ತಿರುಗಿ ಬರುವಷ್ಟರ ಗೋಪಿಯರು ತಮ್ಮ ತಮ್ಮ ಬುಟ್ಟಿಗಳನ್ನು ಹೊತ್ತುಕೊಂಡು ನದಿಯನ ದಾಟಲು ಸಿದ್ಧರಾಗಿ ನಿಂತಿದ್ದರು. ವ್ಯಾಸನು ಅವರನ್ನು ನೋಡಿ ನದಿಯ ಕಡೆ ತಿರುಗಿ “ಭಗವತೀ, ಮಾತೇ ಯಮುನಾ ಇಂದು ನಾನು ಏನೊಂದೂ ಆಹಾರ ನ್ನು ತೆಗೆದುಕೊಳ್ಳದೆ ಇದ್ದುದು ನಿಜವಾದರೆ ನನಗೂ ಈ ಗೋಪಿಯರಿಗ ನಿನ್ನ ಒಡಲಲ್ಲಿ ದಾರಿಯನ್ನು ಕೊಡು, ಎಂದು ಪ್ರಾರ್ಥಿಸಿದನು.

ವ್ಯಾಸನ ಪ್ರಾರ್ಥನೆಯು ಮುಗಿಯುವದರೊಳಗಾಗಿ ಯಮುನೆಯ ಇಬ್ಭಾಗವಾಗಿ ಒಡೆದು ತನ್ನ ಒಡಲಿನಲ್ಲಿ ದಾರಿಯನ್ನು ಬಿಟ್ಟು ಬಿಟ್ಟಳು. ಗೋ ಯರು ಆಶ್ಚರ್ಯವಿಸ್ಮಯಗಳಿಂದ ಬೆಪ್ಪಾಗಿ ನಿಂತರು. ಆಗ ವ್ಯಾಸನು ತ

ಯರಿರಾ. ನಡೆಯಿರಿ ಯಮುನಾ ದೇವಿಯು ನಿಮಗೆ ದಾರಿಯನ್ನು ಬಿಟ್ಟು ನಿಂತಿ ರುವಳು ಎನ್ನುತ್ತ ಮುಂದೆ ನಡೆದನು. ಗೋಪಿಯರು ಅವನ ಹಿಂದೆ ನಡೆದು ನದಿಯ ಆಚೆಯ ದಂಡೆಯನ್ನು ಸೇರಿದರು.

ವ್ಯಾಸನು ಯಮುನೆಯನ್ನು ಪ್ರಾರ್ಥಿಸುವಾಗ ತಾನು ಈಹೊತ್ತು ಏನೊಂದೂ ಆಹಾರವನ್ನು ತೆಗೆದುಕೊಳ್ಳದೆ ಇದ್ದುದು ನಿಜವಾದರೆ ಎಂದು ನುಡಿ ದದ್ದು ಗೋಪಿಯರಿಗೆ ತಿಳಿಯಲಿಲ್ಲ. ಇದೇ ಈಗ ಮೂರು ನಾಲ್ಕು ಗಡಿಗೆ ತುಂಬ ಹಾಲು ಮೊಸರು ಬೆಣ್ಣೆಗಳನ್ನು ತಿಂದ ವ್ಯಾಸನು ತಾನು ಏನೂ ತಿನ್ನಲಿಲ್ಲವೆಂ ನ್ನುವದನ್ನು ಕಂಡು ಅವರು ಆಶ್ಚರ್ಯದಿಂದ ಹೀಗೇಕೆಂದು ಅವನನ್ನು ಕೇಳಿದರು ಆಗ ವ್ಯಾಸನು " ತಂಗಿಯರಿರಾ. ನೀವು ಹಾಲು ಮೊಸರು ಬೆಣ್ಣೆಗಳನ್ನೂ ಗಡಿಗೆ ಯಲ್ಲಿ ತುಂಬಿ ತಲೆಯ ಮೇಲೆ ಹೊತ್ತುಕೊಂಡಿರುವಂತೆಯೇ ಅವುಗಳನ್ನು ನಾನು ಈ ತೊಗಲಿನ (ಘಟ) ಗಡಿಗೆಯಲ್ಲಿಟ್ಟುಕೊಂಡಿರುವೆನಲ್ಲದೆ ಅವುಗಳನ್ನು ತಿಂದವ ನಲ್ಲ! ಎಂದು ನುಡಿದು ತನ್ನ ಕೆಲಸಕ್ಕೆ ನಡೆದನು.

ಆತ್ಮಜ್ಞಾನಿಯಾದ ವ್ಯಾಸದೇವನು ಹಾಲು ಬೆಣ್ಣೆ ಮೊಸರುಗಳನು ತೊಗಲಿನ ಚೀಲದಂತಿರುವ ಒಡಲಿನಲ್ಲಿ ಸುರಿದುಕೊಂಡುದೇನೋ ನಿಜ. ಆದರೆ ಅವನಿಗೆ ಆ ಪದಾರ್ಥಗಳಲ್ಲಿ ಮೋಹಾಸಕ್ತಿಗಳಿರಲಿಲ್ಲ. ಅವು ತನ್ನ ಜೀವನಕ್ಕೆ ಬೇಕೇಬೇಕೆಂಬ ಭಾವನೆಯು ಅವಲ್ಲಿರಲಿಲ್ಲ. ಆದುದರಿಂದಲೇ ಆತನ ಮಹಿಮೆಗೆ ಮೆಚ್ಚಿದ ಯಮುನೆಯು ತನ್ನ ಒಡಲಿನಲ್ಲಿ ದಾರಿಯನ್ನು ಕೊಡಬೇಕಾಯಿತು.

ಸಾ॥ ಪಾಲ್ಬೆಣ್ಣೆ ಮೊಸರುಗಳ ನೋಡಲೋಳಿಕ್ಕಿದ ಜ್ಞಾನಿ ।
ಪಾಲ್ಬೆಣ್ಣೆ ಮೊಸರುಣ್ಣದಂತೆ ॥
ಪಾಲ್ಬೆಣ್ಣೆಯುಂದದೊಳ್ ಜಗವನ್ನೆ ವ್ಯಾಪಿಸಿದ ।
ಪಾಲ್ಬೆಣ್ಣೆಗಳನೊಳ್ ಬೆರೆಯ್ವೆ ॥ ೧ ॥

---

## ೧೬ ಭಕ್ತಾಭಿಮಾನಿಯಾದ ಭಗವಂತನು.

ಒಂದು ಊರಲ್ಲಿ ಒಂದು ಶಿವಾಲಯವಿದ್ದಿತು. ಊರ ಪುರೋಹಿತನು ಆ ಶಿವಾಲಯದ ಅರ್ಚಕನು. ತ್ರಿಕಾಲದಲ್ಲಿಯೂ ಶಿವ ಪೂಜೆ ಮಾಡಬೇಕೆಂದು ಊರ ವರು ಕೆಲವು ಭೂಮಿಯನ್ನು ಪುರೋಹಿತನಿಗೆ ಉಂಬಳಿ ಕೊಟ್ಟಿದ್ದರು.

ಬ್ರಾಹ್ಮಣನು ತುಂಬಾ ಭಕ್ತಿವಂತನು. ಆವನಿಗೆ ಹತ್ತು ವರ್ಷದ ಒಬ್ಬನೇ ವ
ಸಿದ್ದನು.

ಒಂದು ದಿನ ಆದೇನೋ ಕೆಲಸಕ್ಕೆಂದು ಪುರೋಹಿತನು ನೆರೆಯೂ
ಹೋಗಿದ್ದನು. ಹೋಗುವಾಗ ತನಗೆ ಸಾಯುಂಕಾಲದ ಒಳಗಾಗಿ ತಿರುಗಿ ಬ
ವುದಾಗದಿದ್ದರೆ ಶಿವಾಲಯುದ ರಾತ್ರಿಯ ಪೂಜೆಗೆ ಮಗನನ್ನು ಕಳುಹಬೇಕೆಂ
ದೇವರ ನೈವೇದ್ಯಕ್ಕೆ ಹಣ್ಣು ಹಾಲುಗಳನ್ನು ಕೊಟ್ಟು ಕಳುಹೆಂದೂ ಹೆಂಡ
ಹೇಳಿ ಹೋಗಿದ್ದನು.

ಪ್ರದೋಷ ಕಾಲವು ವಿಾರಿ ಸಾಯುಂಕಾಲವಾದೊಡನೆಯೇ ಪುರೋಹಿ
ಹೆಂಡತಿಯು ಮಗನನ್ನು ಕರೆದು, ಬೇಗನೆ ಶಿವಾಲಯುಕ್ಕೆ ಹೋಗಿ ಸಾಯುಂಕಾ
ಪೂಜೆಯನ್ನು ಮುಗಿಸಿ ಬಾರೆಂದು ಒಂದು ಹರಿವಾಣದಲ್ಲಿ ಕೆಲವು ಹಣ್ಣುಗಳನ
ಥಾಲಿಯಲ್ಲಿ ಹಾಲನ್ನೂ ಪೂಜೋಪಕರಣಗಳನ್ನೂ ಸಿದ್ಧಮಾಡಿ ಕೊಟ್ಟು ಕಳ
ನಳು. ಬಾಲಕನು ತಾಯಿಯು ಕೊಟ್ಟ ಪುಜೋಪಕರಣಗಳನ್ನೂ ದೀಪವನ
ತೆಗೆದುಕೊಂಡು ಶಿವಾಲಯುಕ್ಕೆ ನಡೆದನು.

ಪುರೋಹಿತನ ಮಗನು ಶಿವಾಲಯುಕ್ಕೆ ಹೋಗಿ ತನಗೆ ತಿಳಿದಂತೆ ಪ
ಯನ್ನು ಮಾಡಿ ದೀಪ ಧೂಪಗಳನ್ನೆಲ್ಲ ಅರ್ಪಿಸಿದ ಬಳಿಕ ಶಿವನ ಪ್ರತಿಮೆಯ
ರಿಗೆ ತಾನು ತಂದಿದ್ದ ನೈವೇದ್ಯವನ್ನಿಟ್ಟು ಸಾಷ್ಟಾಂಗ ನಮಸ್ಕಾರ ಮಾಡಿದನು

ಬಾಲಕನು ಶಿವನ ಪ್ರತಿಮೆಯು ನೈವೇದ್ಯವನ್ನು ಪ್ರತ್ಯಕ್ಷವಾಗಿ ಸ್ವೀಕರಿ
ವದೆಂದು ನಂಬಿದ್ದನು. ಅನನು ಕೈಮುಗಿದುಕೊಂಡು ದಯಾನಿಧೇ, ಪರಮ
ಶ್ವರಾ ನೈವೇದ್ಯವನ್ನು ಸ್ವೀಕರಿಸು, ಎಂದು ಪ್ರಾರ್ಥಿಸಿದನು.

ಎರಡು ಗಳಿಗೆಯುವರೆಗೂ ಶಿವನ ಮೂರ್ತಿಯು ನೈವೇದ್ಯವನ್ನು ಸ್ವೀಕ
ಲಿಲ್ಲ. ಬಾಲಕನಿಗೆ ಸಂಶಯುವುಂಟಾಯಿತು. ತಾನು ತಂದೆಯಂತೆ ಮಂತ್ರ
ಳನ್ನು ಅನ್ನದೆ ಇದ್ದುದರಿಂದಲೋ ತನ್ನ ಪೂಜಾ ವಿಧಾನದಲ್ಲಿ ಇನ್ನಾವ ಕೊ
ಯುಂಟಾದುದರಿಂದಲೋ ಈಶ್ವರನು ಕೋಪಗೊಂಡು ತಾನಿಟ್ಟ ನೈವೇದ್ಯವ
ಸ್ವೀಕರಿಸದೆ ಇರುವನೆಂದು ಅವನು ಭಾವಿಸಿಕೊಂಡನು.

ಆಗ ಅವನು ಪುನಃ ಹೇ, ದಯಾನಿಧೇ, ಶಂಕರಾ ನಾನು 'ಇನ್ನೂ ಮ
ತಂತ್ರಗಳನ್ನು ಕಲಿಯಲಿಲ್ಲ. ತಂದೆ ಮನೆಯಲ್ಲಿಲ್ಲವಾದುದರಿಂದ ನಾನೇ ಪೂ
ಬರಬೇಕಾಯಿತು. ನನ್ನ ಸರ್ವಾಪರಾಧಗಳನ್ನೂ ಕ್ಷಮಿಸಿ ನೈವೇದ್ಯವನ್ನು ಸ್ವ

 

ಸು. ರಾತ್ರಿಯು ಹೆಚ್ಚುತ್ತ ನಡೆದಿದೆ. ಹೆಚ್ಚು ರಾತ್ರಿಯಾದರೆ ಕತ್ತಲೆಯಲ್ಲಿ ನಾನೊಬ್ಬನೇ ಮನೆಗೆ ಹೋಗಲಾರೆನು. ಮೇಲಾಗಿ ಅಮ್ಮನು ಇಷ್ಟೇಕೆ ತಡವಾದೆಯೆಂದು ಬೈಯುವಳು. ದಯಮಾಡಿ ಬೇಗನೆ ನೈವೇದ್ಯವನ್ನು ಸ್ವೀಕರಿಸು. ಎಂದು ಮತ್ತೊಮ್ಮೆ ನಮಸ್ಕಾರ ಮಾಡಿದನು. ಆದರೂ ಶಿವನ ಮೂರ್ತಿಯು ಮಾತಾಡಲಿಲ್ಲ; ಹಾಲು ಹಣ್ಣುಗಳನ್ನು ಸ್ವೀಕರಿಸಲಿಲ್ಲ. ಬಾಲಕನು ಅಂಜಿ ಅಳಲಾಡಗಿದನು. ಹೇ, ತಂದೇ, ಜಗದೀಶ್ವರಾ, ಯಾವ ಅಪರಾಧವಿದ್ದರೂ ಕ್ಷಮಿಸಿ ನೈವೇದ್ಯವನ್ನು ಸ್ವೀಕರಿಸೆಂದು ಮತ್ತೊಮ್ಮೆ ಬೇಡಿಕೊಂಡನು.

ಬಾಲಕನ ವಿಶುದ್ಧವಾದ ಭಕ್ತಿಭಾವವನ್ನು ಕಂಡು ಭಕ್ತವತ್ಸಲನಾದ ಭಗವಂತನು ಬೇರೆ ದಾರಿ ತೋರದೆ ಶಿವನ ಪ್ರತಿಮೆಯಲ್ಲಿ ಪ್ರಕಟವಾಗಿ ನೈವೇದ್ಯವನ್ನು ಸ್ವೀಕರಿಸಿದನು. ಶಿವನಮೂರ್ತಿಯು ನೈವೇದ್ಯವನ್ನು ಸ್ವೀಕರಿಸುವದನ್ನು ನೋಡಿ ಬಾಲಕನಿಗೆ ಪರಮಾನಂದವಾಯಿತು. ಅವನು ಸಂತೋಷದಿಂದ ಮನೆಗೆ ಬಂದು ನಡೆದ ಸಂಗತಿಯನ್ನೆಲ್ಲ ತಾಯಿಗೆ ಅರುಹಿದನು. ಇದೀಗ ಭಗವಂತನ ಭಕ್ತವತ್ಸಲತೆ.

ಸಾಂ ॥ ಭಕ್ತರಭಿಮಾನಿ ಶ್ರೀಹರಿ ತನ್ನ ಪೂಜಿಸುವ ।
ಭಕ್ತರಾಪತ್ತಿನಲ್ಲಿರಲು ॥
ಭಕ್ತಿಭಾವನೆಯಿಂದ ಮರೆವೊಕ್ಕು ಕರೆಯೆ ಸು ।
ವ್ಯಕ್ತರೂಪವ ಧರಿಸುವನು ॥ ೧ ॥

---

## ೧೭. ಅಂಗಡಿಕಾರನ ಕಪಟ ತಂತ್ರ.

ಒಂದು ಊರಲ್ಲಿ ಒಬ್ಬ ಅಂಗಡಿಕಾರನಿದ್ದನು. ನೋಡುವವರಿಗೆ ಅವನಂಥ ದೇವಭಕ್ತನು ಬೇರೊಬ್ಬನಿಲ್ಲವೆಂಬಂತೆ ತೋರುವನು. ಬಾಯಿಯಲ್ಲಿ ಸರ್ವದಾ ಹರಿನಾಮಸ್ಮರಣೆ. ಕೊರಳಲ್ಲಿ ತರತರದ ಜಪಮಾಲೆಗಳು. ಹಣೆಯಲ್ಲಿ ಉಜ್ವಳವಾಗಿ ತೋರುತ್ತಿರುವ ಅಂಗಾರ ಅಕ್ಷತೆಗಳು. ಯಾವಾಗಲೂ ಅಂಗಡಿಯ ಒಳಗೆ ಕುಳಿತು ಹರಿನಾಮಸ್ಮರಣೆ ಮಾಡುತ್ತಿರುವನು.

ಅಂಗಡಿಕಾರನ ಈ ತರದ ನಡತೆಯನ್ನು ನೋಡಿ ಊರವರು ಇವನು ಒ
ಧಾರ್ಮಿಕನೂ ಸತ್ಯವಂತನಾದ ವ್ಯಾಪಾರಿಯೂ ಎಂದು ತಿಳಿದಿದ್ದರು. ಅ
ರಿಗೆ ಏನು ಸಾಮಾನು ಬೇಕಿದ್ದರೂ ನೆಟ್ಟಗೆ ಇವನ ಅಂಗಡಿಗೆ ಬರುವರು.

ಅಂಗಡಿಗೆ ಗಿರಾಕಿಗಳು ಬಂದ ಸುಳಿವು ತಿಳಿದೊಡನೆ ಒಳಗೆ ಕುಳಿತ ಯ
ಮಾನನು ಕೇಶವ, ಕೇಶವ, ಎನ್ನುವನು. ಕೂಡಲೆ ಹೊರಗೆ ಕೆಲಸ ಮಾಡುವ
ನೊಬ್ಬನು ಗೋಪಾಲ, ಗೋಪಾಲ, ಎನ್ನುವನು. ಅವನ ಸಂಗಡಲೇ ಮತ್ತೆ
ಬ್ಬನು "ಹರಿ, ಹರಿ" ಎನ್ನುವನು. ಈ ಮಾತುಗಳನ್ನು ಕೇಳಿದೊಡನೆ ಒಳಗಿ
ವನು ಪುನಃ ಹರ ಹರ ಮಹಾದೇವ ಎಂದು ಬಿಡುವನು.

ಇಷ್ಟಾದ ಬಳಿಕ ಗಿರಾಕಿಯು ಬೇಡಿದ ಸಾಮಾನುಗಳನ್ನು ಕೊಟ್ಟು ಕ
ಹಿಸುವರು. ಗಿರಾಕಿಗಳು ಅಂಗಡಿಯೊಳಗಿನ ಆಳುಮಕ್ಕಳ ಮತ್ತು ಯಜಮಾ
ನನ ದೇವಭಕ್ತಿಯನ್ನು ನೋಡಿ ತುಂಬಾ ಸಂತೋಷಪಟ್ಟು ಅವರು ಹೇಳ
ಧಾರಣೆಯಿಂದ ಸಾಮಾನುಗಳನ್ನು ಒಯ್ಯುವರು. ಅಳತೆ ತೂಕಗಳನ್ನೂ ಹೆಚ
ಎಚ್ಚರಿಕೆಯಿಂದ ನೋಡುತ್ತಿರಲಿಲ್ಲ.

ಆ ಅಂಗಡಿಯೊಳಗಿನ ನಿಜವಾದ ಸಂಗತಿಯು ಮಾತ್ರ ಈ ಹೊರ
ತೋರಿಕೆಯಿಂದ ತೀರ ಭಿನ್ನವಾಗಿತ್ತು. ಯಜಮಾನನು "ಕೇಶವ, ಕೇಶವ
ಎಂದರೆ ಬಂದವನು ಯಾರೆಂದು ಕೇಳಲು ಅದಕ್ಕೆ ಸೇವಕನು ಗೋಪಾ
ಎಂದರೆ ದನಕಾಯುವ ಒಕ್ಕಲಿಗನೆಂದು ಉತ್ತರ ಹೇಳುತ್ತಿದ್ದನು. ಮತ್ತೆ
ಬ್ಬನು ಹರಿ, ಹರಿ ಎಂದರೆ ಅವನನ್ನು ಮೋಸಗೊಳಿಸಬಹುದೇ ಎಂದು ಪ್ರ
ಮಾಡಲು ಯಜಮಾನನು ಹರ ಹರ, ಎಂದು ಅಪ್ಪಣೆ ಕೊಡುತ್ತಿದ್ದನು.
ಬಳಿಕ ಆಳುಗಳು ಬೆಲೆಯನ್ನು ಒಂದಕ್ಕೆ ಎರಡಾಗಿ ಹೇಳಿಯೋ ಇನ್ನಾವ ರ
ಯಿಂದಲೋ ಮೋಸ ಮಾಡಿ ಕಳುಹಿಸುತ್ತಿದ್ದರು.

ಸಾ ॥ ಹೊರಗಿನಾಡಂಬರದ ನಡೆನುಡಿಗಳಿಂದಲೆ ।
ವರಭಕ್ತನೆಂದು ನಂಬದಿರು ॥
ಪರಮಾತ್ಮನಲಿ ಲೀನಭಾವದಲಿ ಬೆರೆದಿರುವ ।
ಗುರುಪುಂಗವನ ಸೇವಿಸುವುದು ॥

## ೧೮. ಲಕ್ಷ್ಮೀನಾರಾಯಣರು.

ಶ್ರೇಶಶಾಯಿಯಾದ ಶ್ರೀಮನ್ನಾರಾಯಣನು ಕ್ಷೀರಸಾಗರದಲ್ಲಿ ಸುಖ
ಲ್ಲಿ ಸಗಳಲ್ಲಿ ಕುಳಿತಿರಲು ಲಕ್ಷ್ಮೀದೇವಿಯು ಆತನ ಪಾದಸೇವೆಯನ್ನು ಮಾಡು
ದ್ದಳು. ಭಗವಂತನು ಒಮ್ಮಿಂದೊಮ್ಮೆ ಎದ್ದು ಕಾರ್ಯಾವಸರಕ್ಕೆ ಹೊರ
ರುವದನ್ನು ನೋಡಿ ದೇವಿಯು ಇಷ್ಟೇಕೆ ಅವಸರವೆಂದು ಕೇಳಿದಳು. ಆಗ
ವಂತನು “ ದೇವೀ ಭೂಲೋಕದಲ್ಲಿ ನನ್ನ ಪರಮಭಕ್ತನೊಬ್ಬನು ಮಹಾವಿಪ
ಲ್ಲಿರುವನು. ಆತನ ಸಂರಕ್ಷಣಕ್ಕಾಗಿ ಹೊರಟಿರುವೆನು ” ಎಂದು ನಡೆದನು.

ಮತ್ತೊಂದು ಕ್ಷಣದಲ್ಲಿಯೇ ಭಗವಂತನು ತಿರುಗಿ ಬಂದುದನ್ನು ನೋಡಿ
ಕ್ಷ್ಮೀದೇವಿಯು ಇದೇನು! ಇಷ್ಟು ಬೇಗನೆ ತಿರುಗಿ ಬಂದಿರಿ! ಭೂಲೋಕಕ್ಕೆ
ೀಗಿ ಭಕ್ತನನ್ನು ವಿಪತ್ತಿನಿಂದ ಉದ್ಧಾರ ಮಾಡುವ ವಿಚಾರವನ್ನು ನಿಲ್ಲಿಸಿಬಿಟ್ಟಂ
ೋರುತ್ತದೆ ” ಎಂದಳು. ದೇವಿಯ ಮಾತಿಗೆ ಭಗವಂತನು ಮುಗುಳು ನಗೆ
ಂದ–“ ನನ್ನ ಭಕ್ತಾಗ್ರಣಿಯೊಬ್ಬನು ಭಗವದ್ಧ್ಯಾನದಲ್ಲಿ ಆಸಕ್ತನಾಗಿ ನಡೆದಿರ
ದಾರಿಯಲ್ಲಿ ಅಗಸ (ಮಡಿವಳ) ನು ತೊಳೆದು ಒಣಗಿಸಿದ ಅರಿವೆಯನ್ನು ನೋ
ತುಳಿಯುತ್ತ ನಡೆದಿದ್ದನು. ಆ ಅಗಸನು ಇದನ್ನು ನೋಡಿ ದೊಡ್ಡ ಬಡಿಗೆಯ
ತಕೊಂಡು ಆತನನ್ನು ಹೊಡೆಯಲು ಹೊರಟ ಕೂಡಲೆ ನಾನು ಅವನ
ಧಾರಕ್ಕೆಂದು ಹೊರಡಬೇಕಾಗಿತ್ತು. ನಾನು ನಾಲ್ಕು ಹೆಜ್ಜೆ ಹೋಗುವದ
ಗಾಗಿ ಆ ಭಕ್ತನು ತನ್ನನ್ನು ಹೊಡೆಯಲು ಬಂದ ಅಗಸನನ್ನು ತಿರುಗಿ ಹೊ
ಲು ಕೈಯೆತ್ತಿದ್ದು ತಿಳಿಯಿತು. ಕೂಡಲೆ ನಾನು ತಿರುಗಿ ಬಂದು ಬಿಟ್ಟೆನ
ರಕ್ಷಣೆಯನ್ನು ತಾನೇ ಮಾಡಿಕೊಳ್ಳುವೆನೆಂಬ ಭಾವನೆಯು ಆತನಲ್ಲಿ ಹುಟ್ಟ
ಡನೆಯೇ ಆತನನ್ನು ರಕ್ಷಿಸುವ ನನ್ನ ಮೇಲಿನ ಭಾರವು ಇಲ್ಲದಂತಾಯಿತಲ್ಲವೇ!

ಲೋಕದಲ್ಲಿ ಯಾವಾತನು ಭಗವಂತನನ್ನೇ ಅವಲಂಬಿಸಿರುವನೋ ಸಂಪ
ಲ್ಲಿಯೂ ವಿಪತ್ತಿನಲ್ಲಿಯೂ ಆತನೇ ಗತಿಯೆಂದು ನಂಬಿ ನಡೆಯುವವನೋ
ನನ್ನು ಮಾತ್ರ ಭಗವಂತನು ಸಕಲ ವಿಪತ್ತುಗಳಿಂದಲೂ ಉದ್ಧಾರ ಮಾಡುವ
ಲ್ಲಿ ಸಂಶಯವಿಲ್ಲ.

ಪಂ|| ಹರಿಯೆ ರಕ್ಷಕನೆಮಗೆ ಹರಿಯೆ ಶಿಕ್ಷಕನೆಮಗೆ । ಹರಿಯೆ ನಮಗಾಧಾರವೆಂಬ ||
ಹರಿಭಕ್ತನಿಗೆ ಬಂದ ಕಷ್ಟ ತಾಪತ್ರಯವ । ಹರಿಯೆ ಪರಿಹರಿಸಿ ಪೊರೆಯುವನು ||

## ೧೯ ಮುಕ್ತಿಗೆ ಭಕ್ತಿಯೇ ಕಾರಣವು.

ಪುಣ್ಯನದಿ ಗಂಗೆಯು ಹಿಮಾಚಲದ ನಿರ್ಜನವಾದ ಗಿರಿಕಂದರದಲ್ಲಿ
ಯವಾಗಿರುವದು. ಈ ಮಲೆನಾಡಿನ ಸಣ್ಣ ಸರುವೇ ಮುಂದೆ ಬೆಳೆಬೆಳೆದು ವ
ನದಿಯಾಗಿ ತನ್ನ ಶಾಖೋಪಶಾಖೆಗಳಿಂದ ಉತ್ತರ ಹಿಂದುಸ್ಥಾನದ, ವಿ
ವಾದ ದೇಶಕ್ಕೆ ಅಪಾರ ಸಂಪತ್ತನ್ನೀಯುವ ಬೈಲು ಭೂಮಿಯನ್ನು
ಮಾಡಿ, ಅದಕ್ಕೆ ಕಾಲಕಾಲಕ್ಕೆ ನೀರುಣಿಸಿ ಕೋಟ್ಯನುಕೋಟಿ ಪ್ರಜೆಗ
ಸಂರಕ್ಷಿಸುವದು. ಅದರ ಈ ಬಗೆಯ ಮಹದುಪಕಾರಕ್ಕಾಗಿಯೇ ಹಿ
ಆರ್ಯರು ಆ ನದಿಗೆ ಅಷ್ಟೊಂದು ಮಹತ್ವವನ್ನು ಕೊಟ್ಟರೆಂತಲೂ ಅದ
ಗುವ ಲೋಕೋಪಕಾರಕ್ಕಾಗಿಯೇ ಅವರು ತಮ್ಮ ಕೃತಜ್ಞತಾಭಾವ
ತೋರ್ಪಡಿಸಿ ಅದಕ್ಕೆ ದೈವತ್ವವನ್ನು ಕಲ್ಪಿಸಿದರೆಂತಲೂ, ಅದರ ಜಲದಲ್ಲಿ ಅ
ಘವಾದ ಪುಣ್ಯದಾಯಕವೂ ಅತಏವ ಮೋಕ್ಷದಾಯಕವೂ ಅಖಿಲಪಾಪ
ಕವೂ ಆದ ಮಹಾಮಹಿಮೆಯಿರುವದೆಂದು ಜಗತ್ತಿಗೆಲ್ಲ ಸಾರಿದರೆಂತಲೂ
ಜನ ಪಂಡಿತರು ತರ್ಕಿಸುವರು. ಏನೇ ಇದ್ದರೂ ಆ ಭಾಗಿರಥಿಯ ಜಲವು
ಗಳಿಗೆ ಪವಿತ್ರವಾದದ್ದೇ ಸರಿ; ಭಕ್ತಿಯುತರಾದ ಭಾವಿಕ ಭಕ್ತವೃಂದಕ್ಕೆ ಪ
ದಾಯಕವೇ ಸರಿ!

ಈ ಭಾಗೀರಥೀ ನದಿಯ ತೀರದಲ್ಲಿ ಹಲವು ಮಹಾ ಕ್ಷೇತ್ರಗಳಿರು
ಪ್ರಯಾಗ ( ಅಲಹಾಬಾದ ) ಕ್ಷೇತ್ರದ ತ್ರಿವೇಣೀ ಸಂಗಮ ಸ್ಥಾನವೂ ಶ್ರೀ
ನಾಥನ ಆವಾಸವಾದ ಕಾಶೀ ಕ್ಷೇತ್ರವೂ ಅವುಗಳ ಹೆಸರುಗಳನ್ನು ಕೇಳಿದ
ತ್ರಕ್ಕೆ ಹಿಂದೂ ಆಬಾಲವೃದ್ಧರ ಅಂತರಂಗದಲ್ಲಿ ಅಗಮ್ಯವಾದೊಂದು
ಪೂಜ್ಯ ಭಾವನೆಯನ್ನು ಉಂಟು ಮಾಡುವುವು. ಇದಕ್ಕೇನು ಕಾರಣವೋ
ಒಡೆದು ಹೇಳಲಾರೆವು. ಆಸೇತು ಹಿಮಾಚಲ ಪರ್ಯಂತ ವ್ಯಾಪಿಸಿರುವ
ಖಂಡದ ಯಾವತ್ತೂ ಹಿಂದೂ ಪ್ರಜೆಗಳ ಸಾತ್ವಿಕ ಅಂತರಂಗದಲ್ಲಿ ಆ
ನದಿಯ ಜಲದ ( ಭಾಗೀರಥಿಯ ತೀರ್ಥದ, ) ಆ ಕಾಶೀ ಕ್ಷೇತ್ರದ ನಾಮ
ಮಾತ್ರದಿಂದ ಉಂಟಾಗುವ ಭಕ್ತಿ ಪ್ರವಾಹಕ್ಕೆ ಯಾವತರದ ಅಂತಃಪ್ರೇರ
ಬಹುದೆಂಬುದನ್ನು ಭೌತಿಕ ಶಾಸ್ತ್ರಗಳಲ್ಲಿಯೂ, ಜಗಚ್ಚಾಲಕನಾದ ಭಗ

ಂದೆ ಕೇವಲ ಕ್ರಿಮಿ ಸ್ವರೂಪನಾಗಿರುವ ಮೂಢ ಮಾನವನ ಶಕ್ತಿಯಲ್ಲಿಯೂ
ಲವಾದ ಶ್ರದ್ಧೆಯನ್ನಿಡುವ ಆಧುನಿಕ ಪಾಶ್ಚಾತ್ಯ ಸರಸ್ವತಿಯ ಪೋಷ್ಯಪುತ್ರ
ಸಮಾಜ-ಸುಧಾರಣಾದಿಗಳಾದ ನಮ್ಮ ಹಿಂದೂ ಬಾಂಧವರು ಎಷ್ಟು
ತ್ರವೂ ಅರಿಯಲಾರರು; ಇರಲಿ.

ಶಿಶಿರ ಋತುವಿನ ಆರಂಭದ ದಿವಸವದು. ಅಂದೇ ಅದೇನೋ ಒಂದು
ಶಾ ಪರ್ವಕಾಲವೂ ಒದಗಿ ಬಂದಿತ್ತು. ಅದಕ್ಕಾಗಿ ಅಂದು ಪ್ರಾತಃಕಾಲದಲ್ಲಿ
ಕಾಶಿಯ ಗಂಗಾ ನದಿಯ ಐವತ್ತೆರಡು ಘಟ್ಟಗಳ ಮೇಲೆ ಇನ್ನೂ ಸೂ
ರ್ಯೋದಯಕ್ಕೆ ಎರಡು ಗಳಿಗೆ ಅವಕಾಶವಿರುವಾಗಲೆ ಜನರು ತಂಡತಂಡವಾಗಿ
ರುಹತ್ತಿದ್ದರು. ನದಿಯ ನೀಲ-ಜಲದ ಮೇಲೆಯೂ ಮುಂದಿನ ದಂಡೆಯ
ಯ ಹಸರು ಬೆಳಸುಗಳ ಮೇಲೆಯೂ ಮಂಜು ದಟ್ಟಾಗಿ ಮುಸುಕಿಕೊಂಡಿತ್ತು.
ರ ಹಿಂದುಸ್ಥಾನದ ಶಿಶಿರ ಋತುವಿನ ಚಳಿಯನ್ನು ಯಥಾರೀತಿಯಾಗಿ ವರ್ಣಿ
ದೆಂತು ? ಅದರಲ್ಲಿಯೂ ಒಮ್ಮೊಮ್ಮೆ ಹಿಮಾಲಯದ ಕಡೆಯಿಂದ ಒಂದು
ಗಾಳಿಯು ಶೆಳಕು ಬಿಟ್ಟಿತೆಂದರೆ ಕೆಲಕೆಲವು ಕಡೆಗಳಲ್ಲಿ ನೀರು ಹೆಪ್ಪುಗಟ್ಟು
ಉಂಟು. ಇಂತಹ ಚಳಿಯಲ್ಲಿ ಕೆಲವರು "ಕಟಕಟನೆ" ಹಲ್ಲುಗಳನ್ನು
ಕರಿಸುತ್ತ "ಬುಸ್ ಬುಸ್" ಎಂದು ನಿಶ್ವಾಸವಿಡುತ್ತ ಅಪ್ಪುಗೈಯಿಕ್ಕಿಕೊಂಡು
ರದೊಳಗಿನ ಸ್ನಾಯುಗಳೆಲ್ಲ ಆಕುಂಚಿತವಾಗಿ ಹೋಗಿರುವವೋ ಎಂಬಷ್ಟು
ಯನ್ನು ಉಡುಗಿಸಿ ಮುದ್ದೆ ಮಾಡಿಕೊಂಡು ಗಂಗಾ ನದಿಗೆ ಬರುವರು. ಕೆಲ
ಜಗನ್ನಾಥ ಪಂಡಿತನ ಗಂಗಾಲಹರಿಯನ್ನು ಉಚ್ಚ ಸ್ವರದಿಂದ ಹಾಡುತ್ತ
ನೊಂದು ಶ್ಲೋಕಕ್ಕೆ ಒಂದೊಂದು ಬಾರಿಯಂತೆ ನದಿಯಲ್ಲಿ ಮುಳುಗೇಳುತ್ತಿ
ರು. ಕೆಲವು ಘಟ್ಟಗಳ ಮುಂಭಾಗದಲ್ಲಿ ನದಿಯ ನೀರಿನಲ್ಲಿ ಕಂಬಗಳನು
ಗಿಸು ಮಾಡಿದ ಕಟ್ಟಿಗೆಯ ಕಟ್ಟುಗಳ ಮೇಲೆ ಕುಳಿತುಕೊಂಡು ಸಂಧ್ಯಾವಂದ
ನನ್ನು ಆರಂಭಿಸಿ ಬೊಗಸೆಯಲ್ಲಿ ನೀರಿಟ್ಟುಕೊಂಡು ಅರ್ಘ್ಯವನ್ನು ಕೊಡುವು
ಕ್ಕಾಗಿ ಸೂರ್ಯ ನಾರಾಯಣನ ಆಗಮನವನ್ನು ನಿರೀಕ್ಷಿಸುತ್ತ ಉದಯಾಚ
ಕಡೆಗೆ ಅನಿಮಿಷನೇತ್ರದಿಂದ ನೋಡುತ್ತಿದ್ದರು. ಗಂಗಾ ನದಿಯ ಘಟ್ಟಗಳಲ್ಲಿ
ನೋಡಿದರೂ ಮಹಾ ಜನ ಸಮ್ಮರ್ದವೇ ಕಾಣಿಸುತ್ತಿತ್ತು.

ಇಂತಿರುವಾಗ ಆಕಾಶ-ಪಥದಲ್ಲಿ ಕೈಲಾಸವಾಸಿಯಾದ ಪರಮೇಶ್ವರನು
ಪಾರ್ವತೀ ದೇವಿಯೊಂದಿಗೆ ಅದೇನೋ ಕಾರ್ಯ ನಿಮಿತ್ತವಾಗಿ ವಿಮಾನಾ

ರೂಢನಾಗಿ ಸಂಚರಿಸುತ್ತ, ಕಾಶೀ ಕ್ಷೇತ್ರದ ಬಳಿಯಲ್ಲಿ ಬಂದನು. ಆಗ ಪಾರ್ವ
ದೇವಿಯು ಒಮ್ಮಿಂದೊಮ್ಮೆ- "ಜಗದೊಡೆಯನೇ, ನೀನು ಅತಿನಿಷ್ಕರುಣಿ
ಬಂತೆ ತೋರುತ್ತದೆ. ನೋಡಿದೆಯಾ ಆ ನಿನ್ನ ಭಕ್ತವೃಂದವನ್ನು! ಇಂತಹ
ರಿಮಿತವಾದ ಚಳಿಯಲ್ಲಿ ನಡುಗುತ್ತ ಜೀವದ ಪರಿವೆಯೂ ಕೂಡ ಇಲ್ಲದೆ ಮು
ದರಿ ಮೆಟ್ಟಿಬೀಳುವಷ್ಟು ತಣ್ಣಗಾಗಿರುವ ಗಂಗಾ ನದಿಯ ಜಲದಲ್ಲಿ ಒಂದೇ
ನೆಮುಳುಗೇಳುತ್ತಲಿದ್ದಾರೆ; ಧ್ಯಾನಮಾಡುತ್ತಲಿದ್ದಾರೆ. ನೀನೊಂದು ದಿನ '
ತ್ರವಾದ ಗಂಗಾನದಿಯ ನಾಮಸ್ಮರಣ-ಮಾತ್ರದಿಂದ ಸಕಲ ಪಾಪಗಳೂ ಪರಿ
ರವಾಗಿ ಮನುಷ್ಯರು ಸಕಲೇಷ್ಟಾರ್ಥಗಳನ್ನೂ ಪಡೆಯುವರೆಂದು ಹೇಳಿ
ಯಷ್ಟೇ! ಹಾಗಿದ್ದರೆ ಈ ಜನರಿಗೆ ಈ ಪರಿಯಾದ ದುರವಸ್ಥೆಯೇಕೆ? ನೋ
ದೆಯಾ, ಕೆಲವರಿಗೆ ಹೊತ್ತುಕೊಳ್ಳುವದಕ್ಕೆ ಅರಿವೆಯೇ ಇಲ್ಲ; ಕೆಲವರು ಉಟ್ಟಿ
ಬಟ್ಟೆಗೆ ಹತ್ತೆಂಟು ಛಿದ್ರಗಳು; ಕೆಲವರಿಗೆ ಪುಣ್ಯಾತ್ಮರಾದವರು ಈ ಕ್ಷೇತ್ರ
ಇಟ್ಟಿರುವ ಅನ್ನಛತ್ರವೇ ಆಶ್ರಯಸ್ಥಳವು; ಕೆಲವರಿಗೆ ಮಕ್ಕಳಿಲ್ಲ; ಕೆಲವರು
ವೆಯರು; ಕೆಲವರು ವಿಧುರರು; ಕೆಲವರು ಮಹಾ ರೋಗಪೀಡಿತರು! ಇವರೆಲ್ಲ
ಈ ಗಂಗಾ ನದಿಯಲ್ಲಿ ಅನೇಕಬಾರೆ ಸ್ನಾನ ಮಾಡಿ ಇಲ್ಲಿಯ ವಿಶ್ವೇಶ್ವರನ ಮಂ
ದಲ್ಲಿರುವ ನಿನ್ನ ಮೂರ್ತಿಯ ದರ್ಶನವನ್ನು ತೆಗೆದುಕೊಂಡಿರುವರಷ್ಟೇ!" ಎಂ
ಮುಂತಾಗಿ ಭಕ್ತವೃಂದದ ವಿಷಯವಾಗಿ ವಾತ್ಸಲ್ಯವನ್ನೂ ಅವರನ್ನು ತಿರಸ್ಕ
ಬಿಟ್ಟಿದ್ದಕ್ಕಾಗಿ ಪತಿಯಮೇಲೆ ತುಸು ಕೋಪವನ್ನೂ ವ್ಯಕ್ತಪಡಿಸುತ್ತ ನುಡಿದ

ಇದನ್ನು ನೋಡಿ ಪರಮೇಶ್ವರನು ಗಹಗಹಿಸಿ ನಕ್ಕು- "ಭಕ್ತವತ್ಸಲ
ನೀನೆನ್ನುವ ವಿಚಾರವು ನನಗೆ ನೂತನವಾದುದಲ್ಲ. ಎಷ್ಟೋ ಜನ ಮೂಢರು ನ
ಈ ತರದ ಅಪವಾದಗಳನ್ನು ಪ್ರತಿ ನಿತ್ಯ ಹೊರಿಸುತ್ತಿರುವರು. ನೀನು ಈ
ಸೌಮ್ಯವಾಗಿ ನುಡಿದೆ, ಇದು ನನ್ನ ಸುದೈವದ ಮಾತು. ಕೆಲಕೆಲವರು ಬಾಯಿ
ಬಂದಂತೆ ಬೈಯುವದೂ ಉಂಟು. ಆದರೆ ನಾನು ಮಾತ್ರ ಈ ವಿಷಯದಲ್ಲಿ ಎ
ಮಾತ್ರವೂ ಅಪರಾಧಿಯಲ್ಲವೆಂಬದನ್ನು ನನ್ನ ಆತ್ಮವು ಸಂಪೂರ್ಣವಾಗಿ ಹೇಳ
ರುವದು. ಅದರಿಂದಲೇ ನಾನು ಆ ಮಾತುಗಳು ಕೇಳಿದರೂ ಕೇಳದಂತೆಯೇ ಇ
ತ್ತೇನೆ." ಎಂದನು.

ಈ ಮಾತಿನ ಭಾವವು ಪಾರ್ವತೀ ದೇವಿಗೆ ಗೊತ್ತಾಗಲಿಲ್ಲ. ಆಗಲ
" ಹೀಗೆಂದರೇನು"?- " ಪರಮೇಶ್ವರನು, ನಡುವೆಯೇ— "ನೀನು ಕೇಳುವ

ು ನನಗೆ ತಿಳಿಯಿತು. ದೇವೀ, ಇಲ್ಲಿ ನೆರೆದಿರುವ—ಪ್ರತಿನಿತ್ಯ ನೆರೆಯುತ್ತಿರುವ—
ೋಟ್ಯವಧಿ ಜನರಲ್ಲಿ ನಿರ್ಮಲವಾದ ಅಂತಃಕರಣವುಳ್ಳವರು ಎಷ್ಟು ಜನರಿರು
ೆರು! ಸಕಲ ಪ್ರಾಣಿಗಳನ್ನೂ ಸಮಭಾವದಿಂದ ನೋಡುವಷ್ಟು ಮನಸ್ಸಿನ ಉನ್ನ
ಯನ್ನು ಪಡೆದವರು ಎಷ್ಟು ಜನರು? ಅದಾವದೂ ಇಲ್ಲದಿದ್ದರೂ ಕ್ಷಣಕಾಲದ
ುಟ್ಟಿಗಾದರೂ ನಿಶ್ಚಲವಾದ ಭಕ್ತಿಯಿಂದ ಗಂಗಾದೇವಿಯ ನಾಮೋಚ್ಚಾರಣೆ
ಾಡುವವರೂ ಆತ್ಮವಿಶ್ವಾಸವುಳ್ಳವರೂ ಆ ದೇವಿಯ ಮಹಿಮೆಯಲ್ಲಿ ಅಂತಃಕರ
ಣಪೂರ್ವಕವಾದ ಶ್ರದ್ಧೆಯುಳ್ಳವರೂ ಎಷ್ಟು ಮಂದಿ! ನಿನಗೀ ಮಾತನ್ನು ಪ್ರತ್ಯ
ಕ್ಷವಾಗಿಯೇ ತೋರಿಸುತ್ತೇನೆ, ನಡೆ.” ಎನ್ನುತ್ತ ಮತ್ತೂ ಏನೇನೋ ವಿಚಾರಗ
ಳನ್ನೂ ತಾವು ಮಾಡಬೇಕಾಗಿರುವ ಸಂಗತಿಗಳನ್ನೂ ಅವಳಿಗೆ ಸೂಚಿಸಿದನು. ತರು
ವಾಯ ಇಬ್ಬರೂ ಮುಂದಕ್ಕೆ ನಡೆದರು.

ಭಾಗೀರಥೀನದಿಯ ಉತ್ತರದಂಡೆಗುಂಟ ವರುಣಾ ಸಂಗಮದಿಂದ ಅಸೀ
ಸಂಗಮದವರೆಗೆ ಅರ್ಧ ಚಂದ್ರಾಕಾರವಾಗಿ ೩-೪ ಮೈಲುಗಳ ವರೆಗೆ ಹಬ್ಬಿರುವ
ಕಾಶೀಪಟ್ಟಣದ ನೋಟವು ಬಹು ಪ್ರೇಕ್ಷಣೀಯವಾಗಿದೆ. ಈ ನೋಟದ ಭವ್ಯತೆ
ಮನೋಹರತೆ ಶ್ರೇಷ್ಠತೆಗಳನ್ನು ಕುರಿತು ಅನೇಕ ಪರದೇಶದ ಪ್ರವಾಸಿಕರೂ
ಹಿರಿ ಪರಿಯಿಂದ ವರ್ಣಿಸಿರುವರು. ಈ ಸ್ಥಳದಲ್ಲಿರುವ ಅನೇಕ ಘಟ್ಟಗಳಲ್ಲೊಂ
ದಾದ ಪುಣ್ಯಾತ್ಮನಾದ ಸತ್ಯವ್ರತ ಶ್ರೀಹರಿಶ್ಚಂದ್ರ ಮಹಾರಾಜನ ಹೆಸರುಳ್ಳ ಹರಿ
ಶ್ಚಂದ್ರ ಘಾಟಿನ ಹತ್ತರ ಒಂದು ದಿನ ಪ್ರಾತಃಕಾಲದಲ್ಲಿ ದರಿದ್ರವೇಷಧಾರಿಣಿ
ಯಾದ ಅಬಲೆಯೊಬ್ಬಳು ಮೃತಪತಿಯ ಮಸ್ತಕವನ್ನು ತೊಡೆಯ ಮೇಲಿಟ್ಟು
ಕೊಂಡು ತನ್ನ ಸಂಸಾರದ ಅವರ್ಣನೀಯವಾದ ದುರವಸ್ಥೆಯನ್ನೂ ತನಗೊದಗಿ
ರುವ ಮಹಾವಿಪತ್ತನ್ನೂ ಬಹು ಪರಿಯಿಂದ ಹಾಡಿ ಹಾಡಿ ಅಳುತ್ತಲಿದ್ದಳು.
ಂದು ಗಂಗಾನದಿಗೆ ಸ್ನಾನಕ್ಕೆಂದು ಬಂದ ಬ್ರಾಹ್ಮಣರೂ ಶೂದ್ರರೂ ಇನ್ನೂ
ನೇಕರೂ ಅವಳ ಹತ್ತರದಿಂದ ಹಾದು ಹೋಗುವಾಗ ಆ ಕರುಣಾಜನಕವಾದ
ೋಟವನ್ನು ನೋಡಿ ಆ ಸಾಧ್ವಿಯ ಗೋಳಾಟವನ್ನು ಕೇಳಿ ಕ್ಷಣಹೊತ್ತು ನಿಲ್ಲು
ವರು. ಕೆಲವರು ಹಾಗೆಯೇ ಏನೋ ಒಂದು ತರದ ತಿರಸ್ಕಾರವನ್ನೋ ಅಹಂ
ಭಾವವನ್ನೋ ವ್ಯಕ್ತಪಡಿಸುವ ಸ್ವರದಿಂದ “ ಉಹು ! ಆದದ್ದು ಆಗಿ ಹೋಗಿದೆ,
ೂರ್ವದ ಕರ್ಮ, ಹುಚ್ಚಿ! ಇನ್ನು ಅತ್ತು ಮಾಡುವಳೇನು? ” ಎಂದು ಹೇಳುತ್ತ
ಾಟು ಹೋದರು. ಮತ್ತೆ ಕೆಲವರು ಅವಳ ಆ ದುಃಖಮಯವಾದ ಸ್ಥಿತಿ

ಯನ್ನು ನೋಡಿ ಮನಕರಗಿದವರಾಗಿ ಸಹಾನುಭೂತಿಯಿಂದ ಹತ್ತಿರ ಬಂದ
" ಅಮ್ಮಾ! ಏನು ಮಾಡುವುದು? ವಿಚಿತ್ರವಾದೀ ಸಂಸಾರದ ಸ್ಥಿತಿಯೇ ಹೀಗ
ಇಂದು ಕಂಡವರ ಮೋರೆಯನ್ನು ನಾಳೆ ಕಾಣುವೆನೆಂಬ ಭರವಸೆಯಿಲ್ಲ. ಈಗಿದ
ಸ್ಥಿತಿಯು ಇನ್ನೊಂದು ತಾಸಿಗೆ ಉಳಿಯುವದಿಲ್ಲ. ಒಂದು ನಿಮಿಷ ಮುಂದಾಗ
ವದನ್ನು ಈಗ ನಾವು ಎಷ್ಟು ಮಾತ್ರವೂ ತಿಳಿಯಲಾರೆವು. ಸುಮ್ಮನೆ ಅತ
ಮಾಡುವೆಯೇನು? ಮುಂದಿನ ಕೆಲಸವನ್ನು ಸಾಗಿಸೋಣ; ನಮ್ಮಿಂದ ನಿನಗೇನ
ದರೂ ಸಹಾಯವಾಗಬೇಕಾಗಿದ್ದರೆ ಹೇಳು, ತಾಯೀ!" ಎಂದು ನುಡಿದರು.

ಆ ಮಾತನ್ನು ಕೇಳಿ ಅಸಹಾಯಕಳಾದಾ ಅಬಲೆಯು–" ತಂದೆಗಳಿರ
ಮಹದುಪಕಾರವಾಯಿತು; ತಾವು ಹೇಳಿದ ಮಾತು ಸತ್ಯವೇಸರಿ. ನನಗೂ ತಿ
ಯುತ್ತದೆ. ಆದರೆ ಮಾಡಲೇನು? ವಿಚಾರ ಮಾಡಿದರೆ ಎಲ್ಲವೂ ತಿಳಿಯುತ್ತ
ಆದರೆ ಉಕ್ಕಿ ಬರುವ ಮನಸ್ಸಿನ ದುಃಖಾತಿಶಯದ ಭರದಲ್ಲಿ ವಿಚಾರಕ್ಕೆ ಅವಕ
ಶವೇ ಉಳಿಯುವದಿಲ್ಲ. ಪುಣ್ಯಾತ್ಮರಾದ ತಮ್ಮ ಸಹಾನುಭೂತಿಪೂರ್ಣವ
ವಿಚಾರಯುಕ್ತವೂ ಆದ ಉಪದೇಶ ವಾಕ್ಯಗಳನ್ನು ಕೇಳಿ ನನಗೆ ತುಸು ಸಮಾಧ
ನವಾಯಿತು. ಧರ್ಮನಿಷ್ಠರೂ, ವ್ರತೋಪವಾಸಾದಿ ತಪೋನಿಷ್ಠರೂ ಆ
ತಮ್ಮ ಸನ್ನಿಧಿಯಲ್ಲಿ ನನ್ನದೊಂದು ವಿಜ್ಞಾಪನೆಯಿರುವುದು. ತಮ್ಮ ಈ ರಿ
ಯಾದ ಸದಾಚಾರಗಳನ್ನು ನಾನು ಬಹು ದಿವಸಗಳಿಂದಲೂ ನೋಡಿರುವೆನ
ಕೈವಲ್ಯದಾತೆಯಾದ ಭಾಗೀರಥೀ ತೀರದಲ್ಲಿ, ಜಗನ್ನಿಯಂತನಾದ ಶ್ರೀ ವಿಶ್ವನ
ಥನ ಸನ್ನಿಧಿಯಲ್ಲಿ, ಆತನ ಸೇವೆಯನ್ನು ನಿಷ್ಠೆಯಿಂದ ಮಾಡುತ್ತ ವಾಸಿಸಿರು
ತಾವೆಲ್ಲರೂ ಪರಮ ಪವಿತ್ರರಾಗಿರಲಿಕ್ಕೇ ಬೇಕೆಂಬದು ಸಹಜವೇ ಸರಿ. ಹಾಗ
ತಮ್ಮ ಕೊರಳೊಳಗಿನ ರುದ್ರಾಕ್ಷ–ಮಾಲೆಯೂ ಹಣೆಯ ಮೇಲಿನ ವಿಭೂತಿ
ರೇಖೆಗಳೂ ತಾವು ಪೂಜ್ಯರೆಂಬದನ್ನು ಸಾರುತ್ತಿರುವವು. ನೆರೆದಿರುವ ಈ ನೂರಾ
ಜನರಲ್ಲಿ ಯಾರಾದರೂ ಒಬ್ಬರು ಇನ್ನೊಮ್ಮೆ ಈ ಗಂಗಾ ನದಿಯಲ್ಲಿ ಸ್ನಾನಮಾ
ಬಂದು ಮೃತನಾಗಿರುವ ಈ ನನ್ನ ಪತಿಯು ಮಸ್ತಕದ ಮೇಲೆ ವರದ ಹಸ್ತವನ್ನಿ
ಬೇಕು. ತಾವು ನಿಜವಾಗಿಯೂ ಪವಿತ್ರರಾಗಿದ್ದರೆ ನನ್ನ ಪತಿಯು ನಿದ್ದೆಯಿಂ
ಎಚ್ಚತ್ತವನೋ ಎಂಬಂತೆ ಒಮ್ಮಿಂದೊಮ್ಮೆ ಎದ್ದು ಕೂಡ್ರುವನು. ಆದ
ತಮ್ಮಲ್ಲಿ ಏನಾದರೂ ಪಾಪವಿದ್ದರೆ, ಅಪ್ಪಿತಪ್ಪಿಯಾದರೂ ಪರಸ್ತ್ರೀ, ಪ
ಸ್ವಾಪಹಾರ ಮುಂತಾದ ದುಷ್ಕೃತ್ಯಗಳನ್ನು ಮಾಡಿದ ದೋಷವು ತಮ್ಮಲ್ಲಿದ್ದ

ಮಾತ್ರ ಮಹಾ ದುಷ್ಪರಿಣಾಮವಾಗುವದು. ಅಂಥವರ ಹಸ್ತಸ್ಪರ್ಶದಿಂದ ನನ್ನ ಪತಿಯು ಪುನರ್ಜೀವಿತನಾಗಲಾರನು; ಇಷ್ಟೇ ಅಲ್ಲ, ಹಾಗೆ ಸ್ಪರ್ಶಮಾಡಿದ ಮನುಷ್ಯನು ಸಪರಿವಾರವಾಗಿ ನಾಶಹೊಂದುವನು. ಈ ರೀತಿಯಾಗಿ ನನಗೆ ನಿನ್ನಿನ ರಾತ್ರಿ ಕನಸಿನಲ್ಲಿ ಶ್ರೀ ವಿಶ್ವೇಶ್ವರನ ಅಪ್ಪಣೆಯಾಗಿರುವದು. ಆದ್ದರಿಂದ ತಮ್ಮಲ್ಲಿ ಯಾರಾದರೂ ಒಬ್ಬರು ದಯಮಾಡಿ ಇಷ್ಟು ಕೆಲಸವನ್ನು ಮಾಡಿರಿ." ಎಂದು ಬಹು ದೈನ್ಯದಿಂದ ಬಿನ್ನವಿಸಿಕೊಂಡಳು.

ಆ ಸಾಧ್ವೀ ಶಿರೋಮಣಿಯು ಈ ಮಾತುಗಳನ್ನು ಕೇಳಿದ ಕೂಡಲೆ ಅಲ್ಲಿ ನೆರೆದಿದ್ದವರ ಮೋರೆಯ ಮೇಲಿನ ಕಳೆಯು ಒಮ್ಮಿಂದೊಮ್ಮೆ ಇಳಿಯಿತು. ಒಬ್ಬರ ಮುಖವನ್ನೊಬ್ಬರು ಮಿಕಿ ಮಿಕಿ ನೋಡತೊಡಗಿದರು. ಯಾರೊಬ್ಬರೂ ಮುಂದೆ ಬರಲೊಲ್ಲರು. ಒಬ್ಬೊಬ್ಬರೇ ಹಿಂದುಗಾಲಿಕ್ಕಿ ಸರಿದು ಮರೆಯಾಗಹತ್ತಿದರು. "ಇದೇನು ಪೀಚಾಟ! ಬೇಕೆಂದು ಕರೆದು ಕಚ್ಚಿಸಿಕೊಂಡ ಹಾಗಾಯಿತಲ್ಲ!" ಎನ್ನುವ ಅಭಿಪ್ರಾಯವು ಎಲ್ಲರ ಮುಖದಲ್ಲಿಯೂ ಒಡೆದು ತೋರಹತ್ತಿತು. ತುಸು ಹೊತ್ತಿನಲ್ಲಿಯೇ ನೆರೆದವರು, ಹೊಳೆಯುವ ಹೊಂಬಣ್ಣದ ಹಿತ್ತಾಳಿಯ ತಂಬಿಗೆ ಥಾಲಿಗಳನ್ನು ಹಿಡಿದುಕೊಂಡಿದ್ದವರು ಕೆಲವರು, ಬೆಳ್ಳಿಯ ಮುಗುಟನ್ನು ಹಚ್ಚಿದ ಹಾವುಗೆಯನ್ನು ಮೆಟ್ಟಿ ಕಾವಿಯ ವಸ್ತ್ರವನ್ನುಟ್ಟ ಸನ್ಯಾಸಿ ವೇಷದವರು ಕೆಲವರು, ನಾಭಿಯವರೆಗಿನ ಮುಂಭಾಗವೆಲ್ಲ ಮರೆಯಾಗುವಷ್ಟು ರುದ್ರಾಕ್ಷ ಮಾಲೆಯನ್ನು ಧರಿಸಿದವರು ಕೆಲವರು, ಎಲ್ಲರೂ ತಮ್ಮ ತಮ್ಮ ದಾರಿಯನ್ನು ಹಿಡಿದು ನಡೆದರು. ಆ ಸಾಧ್ವಿಗೆ ಸಹಾಯ ಮಾಡುವದು ಒತ್ತಟ್ಟಿಗಿರಲಿ, ಅವಳ ಮಾತಿಗೆ ಪ್ರತ್ಯುತ್ತರವನ್ನು ಕೂಡ ಯಾರೂ ಕೊಡಲಿಲ್ಲ. ಅವಳು ಪುನಃ ಮೊದಲಿನಂತೆ ಅತ್ತು ಗೋಳಾಡಹತ್ತಿದಳು. ಕೆಲಹೊತ್ತಿನ ಮೇಲೆ ಮತ್ತೆ ಕೆಲವರು ಅಲ್ಲಿ ಗುಂಪು ಗೂಡಿ ನೆರೆದರು. ಅವರೊಡನೆಯೂ ಇದೇ ತರದ ಸಂಭಾಷಣವು ನಡೆಯಿತು. ಅವರಲ್ಲಿಯೂ ಯಾರೊಬ್ಬರೂ ಆ ಸಾಧ್ವಿಗೆ ಸಹಾಯ ಮಾಡಲು ಧೈರ್ಯಗೊಳ್ಳಲಿಲ್ಲ. ಹೀಗೇಯೇ ಮಧ್ಯಾಹ್ನದ ಎರಡು ಗಂಟೆಯ ವರೆಗೆ ನಡೆಯಿತು. ನೆರೆದವರು ತಿರುಗಿ ಹೋಗುವಾಗ ಆ ಸಾಧ್ವಿಯು ಕಣ್ಮರೆಯಾಗುವವರೆಗೆ ಮೌನದಿಂದಿರುವರು. ಮುಂದೆ ತಮ್ಮ ತಮ್ಮ ಪೌರುಷವನ್ನು ಸೂರೆ ಮಾಡಲಾರಂಭಿಸುವರು. "ನಾನು ಸ್ನಾನ ಮಾಡಿ ಆ ಪ್ರೇತವನ್ನು ಮುಟ್ಟಬೇಕೆಂದು ಮಾಡಿದ್ದೆನು, ಆದರೆ ಈಗ ಪುನಃ ಯಾವ [illegible]ಂಗೆಯಲ್ಲಿ [illegible]

ಬಿಸ್ಸಿಸು!” ಎಂದು ಕೆಲವರು ಹೇಳುವರು. ಮತ್ತೆ ಕೆಲವರು, ಎಲ್ಲಿಯ ಹೆಂಗಸು ಎಲ್ಲಿಯ ವಿಶ್ವನಾಥನ ಅನುಜ್ಞೆಯೋ ಎಲ್ಲವೂ ಸುಳ್ಳೇ; ನಾವು ಪುಣ್ಯವಂತರಾಗಿ ವವಕ್ಕೂ ಅವಳ ಗಂಡನು ಬದುಕುವವಕ್ಕೂ ಏತರ ಸಂಬಂಧ ? ಎಂದು ನು ದರು. ಇನ್ನನೇಕರು “ಹರಿ, ಅಪ್ಪಿ ತಪ್ಪಿಯೂ ಪಾಪವು ಸಂಘಟಿಸಿರಲಾಗವಂತೆ ನಾವೆಲ್ಲಿ ಅದರ ಲೆಕ್ಕವನ್ನಿಟ್ಟು ಕುಳಿತಿದ್ದೇವೆ ! ಮೇಲೆ ಇವಳ ಗಂಡನನ್ನು ಬದು ಕಿಸಲಿಕ್ಕೆಂದು ಹೋಗಿ ನಾವು ವಿಪತ್ತಿಗೆ ಗುರಿಯಾಗಬೇಕು.” ಎಂದು ಮುಂತಾ ಬಾಯಿಗೆ ಬರುವಂತೆ ಹಂಬಿದರು. ಎಲ್ಲರ ಅಭಿಪ್ರಾಯವೂ ಒಂದೇ. ಸಾವಿ ಸುತ್ತು ಸುತ್ತಿವರೂ ಗುಟು ಒಂದೇ ಸರಿ. ಒಬ್ಬರಿಗೂ ಅಂತರಂಗ ಶುದ್ಧಿಯಿ ಲ್ಲಿಲ್ಲವೆಂಬದೊಂದೇ ನಿಶ್ಚಿತವಾದ ಮಾತು.

ಮಧ್ಯಾಹ್ನದ ಮೂರು ಗಂಟೆಯ ಸುಮಾರಕ್ಕೆ ಒಬ್ಬ ದಾರಿಕಾರನು ಸಾಧ್ವಿಯು ಅಳುತ್ತ ಕುಳಿತಿರುವ ಸ್ಥಳದ ಸಮೀಪದಿಂದ ಹಾಯ್ದು ಹೋಗು ತ್ತಿದ್ದನು. ಅವನ ವೇಷವನ್ನು ನೋಡಿದರೆ ಕೇವಲ ಹುಚ್ಚನಂತೆ ತೋರು ದ್ದನು. ಕೈಯಲ್ಲೊಂದು ನೂರೆಂಟು ತೆಗ್ಗು ಬಿದ್ದ ಚಿಪ್ಪಾಡಿಯಾದ ತಂಬಿಗೆ ಉಟ್ಟ ಧೋತರಕ್ಕೆ ನೂರೆಂಟು ಛಿದ್ರಗಳು. ಮೈಮೇಲಿನ ಜಾಳಿಗೆಯಂಥ ಪಂ ಯಲ್ಲಿ ಕಟ್ಟಿದ ನಾಲ್ಕು ಹಿಡಿ ಅಕ್ಕಿಯ ಕಾಳೂ ಅದರೊಡನೆ ಕೂಡಿಸಿರುವ ಜೆ ಯೂ ಒಡೆದು ಕಾಣಿಸುತ್ತಿದ್ದವು. ಇನ್ನೊಂದು ಕೈಯಲ್ಲಿ ಹಸರು ತೊಪ್ಪಲದ ನಾಲ್ಕಾರು ಮೀನುಗಳನ್ನು ಅಡಗಿಸಿ ಹಿಡಿದಿದ್ದನು. ಇನ್ನೂ ಸ್ನಾನವಿಲ್ಲ; ಸಂಧ್ಯಾ ವಂದನೆಯಿಲ್ಲ. ಮೊದಲು ಜಾತಿಯಿಂದ ಬ್ರಾಹ್ಮಣನಾಗಿದ್ದನಂತೆ! ಆತನು ದಾರಿಯಿಂದ ಹೋಗುವಾಗ ಅಲ್ಲಿ ಅಳುತ್ತಿರುವ ಸಾಧ್ವಿಯನ್ನು ನೋಡಿ ಧಾವಿ ಬಂದು “ತಾಯೀ, ಅಳಬೇಡವಮ್ಮಾ. ಏನಾಯಿತು ? ನಿಮ್ಮ ದೇಶವಾವುದು ಇಲ್ಲಿಗೇತಕ್ಕೆ ಬಂದಿದ್ದಿರಿ ? ಇವರಾರು ? ಅಹಹಾ! ಮೃತರಾಗಿರುವರೇ ? ಏ ಗಿತ್ತಮ್ಮಾ! ಅಯ್ಯೋ ದೈವವೇ!” ಎಂದು ಮುಂತಾಗಿ ಶೋಕಾಕುಲತೆಯಿಂ ನುಡಿದನು. ಸಾಧ್ವಿಯು ಮಹಾ ಮಹಾ ಪೂಜ್ಯರೆಂದು ತೋರುವವರ ಯನ್ನು ಕಣ್ಣಾರೆ ಕಂಡಿದ್ದಳಾದ್ದರಿಂದ ಈ ಹುಚ್ಚನಂತೆ ತೋರುವ ಕ್ಷುದ್ರ ಮ ಷ್ಯನಿಂದೇನಾದೀತೆಂದು ಅವನ ಮಾತುಗಳಿಗೆ ಉತ್ತರವನ್ನೇ ಕೊಡದೆ ಮೊದಲಿ ತೆಯೇ ಅಳುತ್ತ ಕುಳಿತುಕೊಂಡಳು. ಇದನ್ನು ನೋಡಿ ಆತನಿಗೆ ತುಂಬಾ ವಾಯಿತು. ಅವನ ಕುತ್ತಿಗೆಯ ಶಿರಗಳು ಉಬ್ಬಿದವು. ಕಣ್ಣುಗಳಲ್ಲಿ

ತುಂಬಿತು. ದುಃಖಾತಿರೇಕವನ್ನು ನುಂಗಿಕೊಳ್ಳಲಾರದೆ ಆತನು "ಗಳಗಳ" ಅತ್ತು ಬಿಟ್ಟನು! ಇದನ್ನು ನೋಡಿ ಆ ಸಾಧ್ವಿಯು "ತಂದೆಯೇ, ಪಾಪಿಯಾದೆನ ಗಾಗಿ ಅಳುವೆಯೇಕೆ ? ನೀನಾರು ? ಮಹಾ ಮಹಾ ಪೂಜ್ಯರೆನಿಸಿಕೊಳ್ಳುವ ಈ ಕಾಶೀ ಕ್ಷೇತ್ರವಾಸಿಗಳಲ್ಲಿ ಯಾರಿಗೂ ಎನ್ನಯ ಈ ದುರವಸ್ಥೆಯನ್ನು ನೋಡಿ ಕರು ಣೆಯುಂಟಾಗಲಿಲ್ಲ. ಒಬ್ಬರೂ ಅನಾಥೆಯಾದೆನಗೆ ಸಹಾಯ ಮಾಡಲು ಸಿದ್ಧರಾ ಗಲಿಲ್ಲ. ನನ್ನಂತೆಯೇ ದೇಶಿಗನಾಗಿ ತೋರುವ ನಿನ್ನಿಂದ ಏನಾದೀತು !" ಇದನ್ನು ಕೇಳಿ ಆ ದಾರಿಕಾರನು ನಡುವೆಯೇ– "ತಾಯೀ, ಏತರ ಸಹಾಯವಮ್ಮಾ ? ನನಗಿಷ್ಟು ಹೇಳಬಾರದೇ, ಸಾಧ್ಯವಿದ್ದರೆ ನಾನು ಮಾಡುವೆನು. ಈ ಜೀವನವ ನ್ನಾದರೂ ನಿನ್ನ ಸಲುವಾಗಿ ಕೊಡಲು ಸಿದ್ಧನಿರುವೆನು" ಎಂದನು. ಆಗಲಾ ಸಾಧ್ವಿಯು "ಎಂಥೆಂಥ ಸಾಧು ಸನ್ಯಾಸಿಗಳಂತೆ ತೋರಿದವರೇ ತಮ್ಮಿಂಗದಾಗ ದೆಂದು ಹೋಗಿಬಿಟ್ಟರು. ಅಂದಮೇಲೆ ನಿನ್ನಿಂದೇನಾದೀತು. ಇರಲಿ." ಎಂದು ಮೊದಲಿನಂತೆಯೇ ತನ್ನ ಪತಿಯ ಪುನರ್ಜೀವನದ ವೃತ್ತಾಂತವನ್ನು ಹೇಳಿದಳು. ಅದನ್ನು ಕೇಳಿದೊಡನೆಯೇ ಆತನ ಮುಖದಲ್ಲಿ ಆನಂದದ ಕಳೆಯು ಉಕ್ಕಹ ತ್ತಿತು. ಅವನು ತಾನು ತಂದಿರುವ ಸಾಮಗ್ರಿಗಳನ್ನು ಅಲ್ಲಿಯೇ ಇಟ್ಟು, ನದಿಯಲ್ಲಿ ಇಳಿದು ನಿಂತುಕೊಂಡು, ಕೈಜೋಡಿಸಿ ಅತ್ಯಂತ ಭಕ್ತಿಯಿಂದ,

"ಸರ್ವಪಾತಕಸಂಹಂತ್ರೀ ಸರ್ವದುಃಖವಿನಾಶಿನೀ ।
ಸುಖದಾ ಮೋಕ್ಷದಾ ಗಂಗಾ ಗಂಗೈವಪರಮಾಗತಿಃ" ॥

ಎಂದು ಒಮ್ಮೆ ಉಚ್ಚ ಸ್ವರದಿಂದ ಉಚ್ಚರಿಸಿದನು. ಹಾಗು ಮೂರು ಬಾರೆ ನದಿಯಲ್ಲಿ ಮುಳುಗಿ ಎದ್ದನು. ತರುವಾಯ ಆ ತನ್ನ ಒಡಕ ತಂಬಿಗೆಯಲ್ಲಿ ನೀರನ್ನು ತುಂಬಿಕೊಂಡು ಮೇಲೆ ಬಂದು ನದಿಯ ದಂಡೆಯಲ್ಲಿರುವ ಮಳಲನ್ನು ಆ ನೀರಿನಿಂದ ತೊಯಿಸಿ ಒಂದು ಲಿಂಗಾಕಾರವನ್ನು ಮಾಡಿದನು. ಬಳಿಕ ತಾನು ಬರುವಾಗ ಮೀನವನ್ನು ಮರಿಮಾಡಿಕೊಳ್ಳಲು ತಂದಿದ್ದ ಬಿಲ್ವ ಪತ್ರೆಯ ತ್ರಿದಳಗ ಳನ್ನು ಹರಿದು ತಂದು ಪರಮಭಕ್ತಿ ಪೂರ್ವಕವಾಗಿ ಆ ಲಿಂಗಕ್ಕೆ ಏರಿಸಿ ಸಾಷ್ಟಾಂ ಗ ನಮಸ್ಕಾರ ಮಾಡಿದನು. ಇಷ್ಟಾದ ಬಳಿಕ ಆಕೆಯು ಕುಳಿತಿದ್ದಲ್ಲಿಗೆ ಬಂದು ಮತ್ತೊಮ್ಮೆ ತನ್ನ ಇಷ್ಟದೇವತೆಯನ್ನು ಧ್ಯಾನಿಸಿ ಮೃತನ ಮಸ್ತಕದ ಮೇಲೆ ತನ್ನ ಹಸ್ತವನ್ನಿರಿಸಿದನು. ಪರಕ್ಷಣದಲ್ಲಿಯೇ ಮೃತನು "ಜಯ! ಶಂಕರ!" ಎಂದು

ಎದ್ದು ಕುಳಿತನು. ಇದನ್ನು ನೋಡಿ ಸಾಧ್ವಿಯು ಆಶ್ಚರ್ಯ ವಿಸ್ಮಯಗಳ
ಪೆಪ್ಪಾಗಿ ಕುಳಿತು ಬಿಟ್ಟಳು. ಆಗ ದಾರಿಕಾರನು ತಾಯೀ, ನನ್ನ ಕೆಲಸ
ತೀರಿತು. ಹೋಗಿ ಬರುತ್ತೇನೆ. ಎಂದು ವಿನಯದಿಂದ ನುಡಿದು ಹೊರ
ಹೋದನು.

ಇತ್ತ, ಪರಮೇಶ್ವರನು– "ದೇವಿ!, ನೋಡಿದೆಯಾ, ಈ ಜಗತ್ತಿನ ಮಹಿ
ಯನ್ನು! ಮನುಷ್ಯನ ಯೋಗ್ಯತೆಯು ಅವನ ಉಡಿಗೆ ತೊಡಿಗೆಗಳಿಂದ ಗೊತ್ತಾ
ವದಿಲ್ಲ. ಅವನ ಬಾಹ್ಯಾಚರಣೆಗಳಿಂದ ಗೊತ್ತಾಗುವದಿಲ್ಲ. ಅಂತರಂಗ ಶು
ಯಿಲ್ಲದೆ ಬಾಹ್ಯಾಡಂಬರಕ್ಕಾಗಿ ಕಾಶಿಯ ಯಾತ್ರೆಯನ್ನು ಮಾಡುವದ
ದಾಗಲಿ, ಗಂಗಾ ನದಿಯಲ್ಲಿ ಮುಳುಗೇಳುವದರಿಂದಾಗಲಿ, ಎಷ್ಟು ಮಾತ್ರ
ಪ್ರಯೋಜನವಾಗಲಾರದು. ಮುಕ್ತಿಗೆ ಭಕ್ತಿಯೇ ಕಾರಣವಲ್ಲದೆ ಆಡಂಬ
ಆಚರಣೆಗಳು ಎಷ್ಟು ಮಾತ್ರವೂ ಕಾರಣವಾಗಲಾರವು." ಎಂದು ನುಡಿಯ
ದೇವಿಯು ತನ್ನ ತಪ್ಪು ತಿಳುವಳಿಕೆಯನ್ನು ಒಪ್ಪಿಕೊಂಡಳು. ಇಬ್ಬರೂ ಕೈ
ಸವನ್ನು ಕುರಿತು ಹೊರಟು ಹೋದರು.

## ಪ್ರಾರ್ಥನೆ.

“ ಹರಿಯೆ ನಿನ್ನೊಳು ಭಕ್ತಿ ಮುಕ್ತಿಗೆ ।
ಸರಳ ಮಾರ್ಗವದೆಂಬುದರಿಯದೆ ।
ತಿರುತಿರುಗಿ ಮಾಯಾ ಪ್ರಪಂಚದಿ ಸುತ್ತಿ ಬೇಸತ್ತೆ ॥
ಪರಮ ಭಕ್ತಿಯೊಳೀಗ ನಿನ್ನಯ ।
ಚರಣತಲದಲಿ ಬಿದ್ದು ಬೇಡುವೆ ।
ಪರಿಹರಿಸೊ! ನರಜನ್ಮವನು ಕೊಂಡೀ ಸುಮಾಂಜಲಿಯ ”

---

## ಕುಂದಮಾಲೆ.

ಇದು ಮಹಾಕವಿ ದಿಙ್ನಾಗನು ವಿರಚಿಸಿದ ಸಂಸ್ಕೃತ ನಾಟಕದ ಗದ್ಯಾನು ವು. ಕನ್ನಡದ ಕಟ್ಟಾಭಿಮಾನಿಗಳೂ ಸಂಸ್ಕೃತದಲ್ಲಿಯೂ ತುಂಬಾ ಪರಿಜ್ಞಾ ನರೂ ಆದ ಶ್ರೀ. ಬಿ. ರಾಮರಾವ್. ಎಮ್. ಎ. ಎಲ್ಎಲ್. ಬಿ. ಅವರು ರ್ತನಕಾರರು. ಓದುವವರಿಗೂ ರಂಗಭೂಮಿಯಲ್ಲಿ ಅಭಿನಯಿಸುವವ ಈ ಹೊಸನಾಟಕವು ಸರ್ವರೀತಿಯಿಂದಲೂ ಉಪಯುಕ್ತವಾಗಿದೆಯೆಂದರೆ ಯೋಕ್ತಿ ಯಾಗಲಾರದು. ನಾಟಕದ ಕಥೆಯೂ ಹೃದಯದ್ರಾವಕವಾಗಿದೆ. ಯಣದ ಉತ್ತರಕಾಂಡದ ಪೌರಾಣಿಕ ಭಾಗವೇ ಇದಕ್ಕೆ ಆಧಾರವು. ರೀತಿಯಿಂದ ಅಭಿನಯಿಸಿದರೆ ೧-೪-೬ನೆಯ ಅಂಕಗಳಲ್ಲಿ ಪ್ರೇಕ್ಷಕರು ರು ಸುರಿಸದಿರಲಾರರು. ಓದುವಾಗಲೂ ದುಃಖರಸದಿಂದ ಅಂತರಂಗವು ಬರುವದು ಇಂತಹ ಪೌರಾಣಿಕ ನಾಟಕಗಳನ್ನು ಕನ್ನಡ ಕಂಪನಿಯವರು ದೆ ತರುವದು ಹೆಚ್ಚು ಮಹತ್ವದ ಮಾತು. ಬೆಲೆ ೦—೧೩—೦,

**ಮದ್ರಾಸದ (Vepery) ಬಿ. ಎಮ್. ನಾಥ**

**ಕಂಪನಿಯವರಲ್ಲಿ ಪುಸ್ತಕಗಳು ದೊರೆಯುವವು.**

---

ಸಂಖ್ಯೆ ೧೬. **ವಸ್ತ್ರಾಪಹರಣ.** ಬೆಲೆ ೨ ಆಣೆ

ಗ್ರಂಥದ ಹೆಸರಿನಿಂದಲೇ ವಿಷಯವೇನೆಂಬದು ತಿಳಿಯುವಂತಿದೆ. ಸುಲಭ ಸರಳ ಶಳ ಷಟ್ಪದಿಗಳಿಂದ ಈ ಪೌರಾಣಿಕ ಕಥಾಭಾಗವನ್ನು ಓದುಗರ ಕರಗುವಂತೆ ಕಾಲಕ್ಕನುಕೂಲವಾದ ರೀತಿಯಲ್ಲಿ ಬರೆದಿರುವ ಬಾಲಕವಿ ಗೊಡ್ಡು ಶಂಕರ ಭಟ್ಟನ ಪ್ರತಿಭೆಯು ಪ್ರಶಂಸನೀಯವಾಗಿದೆ.

ಪತ್ರ:—**ವಾಸುದೇವ ಐತಾಳ ತರಪಾಡಿ,**

ಬಂಟವಾಳ ಪೋಸ್ಟು (ದ. ಕ.)

---

## ಜಯ ಕರ್ನಾಟಕ.

ಕನ್ನಡದಲ್ಲಿ ಇಂದಿನ ವರೆಗೆ ಪ್ರಕಟವಾದ ಮಾಸಪತ್ರಿಕೆಗಳಲ್ಲಿ ಆಕಾರದ ಪ್ರಕಾರದಲ್ಲಿಯೂ ಇದಕ್ಕೆ ಮೊದಲನೆಯ ನಂಬರು ಕೊಡಬೇಕೆಂದು ಜನರು ಅಭಿಪ್ರಾಯಪಟ್ಟಿರುವರು. ಪ್ರತಿ ಹುಣ್ಣಿವೆಗೆ ತಪ್ಪದೆ ಪ್ರಕಟವಾ ದು. ಎರಡು ವರುಷಗಳ ಅನುಭವದ ಮಾತಿಲ್ಲದೆ ಜಾಹಿರಾತಿನೊಳಗಿನ ನೆಯಲ್ಲ. ವಾಚನಾಭಿರುಚಿಯುಳ್ಳ ಕನ್ನಡಿಗರು ಒಮ್ಮೆ ಪರೀಕ್ಷಿಸಿ ಲಿ. ವ... ಚಂದಾ ೫ ರೂ. ೮ ಆಣೆ ಮಾತ್ರ.

ಪತ್ರ:—ವ್ಯವಸ್ಥಾಪಕ ಜಯ ಕರ್ನಾಟಕ ಧಾರವಾಡ.

## ಪ್ರಬುದ್ಧ ಕರ್ನಾಟಕ.

ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದಿಂದ ಪ್ರಕಟವಾ ಗುವ ತ್ರೈಮಾಸಿಕ ಪತ್ರಿಕೆ. ನಾಲ್ಕು ಸಂಚಿಕೆಗಳಿಗೆ ೩೫೦ ಪುಟಗಳಾಗುವು ಪ್ರತಿ ಸಂಚಿಕೆಯಲ್ಲಿಯೂ ಒಂದೆರಡು ಸುಂದರವಾದ ಕಲಾನೈಪುಣ್ಯದರ್ಶ ಚಿತ್ರಗಳು ಬಂದೇಬರುವುವು. ಲೇಖನಗಳು ಓದಿ ಓದಿ ವಿಚಾರ ಮಾಡುವಷ್ಟ ಉತ್ತಮ ವರ್ಗಕ್ಕೆ ಸೇರಿದವು. ಮುದ್ರಣಾದಿಗಳು ಅನ್ಯ ಪತ್ರಿಕೆಗಳು ಅನುಕರ ಮಾಡುವಂತಿವೆ. ಹೆಚ್ಚಿಗೆ ಹೇಳುವುದೇನು ? ಕನ್ನಡದಲ್ಲಿ ಇಷ್ಟು ಉತ್ತಮವಾಗಿದ ಇಷ್ಟು ಅಗ್ಗವಾಗಿರುವ ಪತ್ರಿಕೆಗಳಲ್ಲಿ ಇದೇ ಮೊದಲನೆಯದು. ವಾರ್ಷಿ ಚಂದಾ ಒಂದೇ ರೂಪಾಯಿ. ಅಂಚೆಯುವೆಚ್ಚ ಬೇರೆ.

**ಪತ್ರ:—ಕಾರ್ಯದರ್ಶಿ ಕರ್ನಾಟಕ ಸಂಘ**
**ಸೆಂಟ್ರಲ್ ಕಾಲೇಜ, ಬೆಂಗಳೂರು.**

---

## ದೇಶೀಯ ವಿದ್ಯಾಶಾಲಾ ಪತ್ರಿಕೆ.

ಉತ್ತಮ ವರ್ಗದ ತ್ರೈಮಾಸಿಕವು. ದೊಡ್ಡ ಆಕಾರದ ಮೂವತ್ತೆರ ಪುಟಗಳ ಸುಂದರ ಮುದ್ರಣದ ನಾಲ್ಕು ಸಂಚಿಕೆಗಳನ್ನು ಎಂಟೇ ಆಣೆಗೆ ಕೊಡು ಸಂಪಾದಕರ ಪರಾರ್ಥ ಸಾಧನೆಯು ಆಶ್ಚರ್ಯಕರವಾಗಿದೆ; ಆನಂದಕರವಾಗಿ ಕನ್ನಡಿಗರು ಅವರ ಈ ಉದಾರಬುದ್ಧಿಯನ್ನು ಉಪಯೋಗಿಸಿಕೊಳ್ಳಲಾರದಿದ್ದ ತಪ್ಪು ಯಾರದು ? ಹೆಚ್ಚಿಗಿನ್ನೇನು ಹೇಳುವುದು.

**ಪತ್ರ:—ಸಂ. ದೇ ವಿ. ಶಾಲಾ ಪತ್ರಿಕೆ, ಹೊಸ ತರಗುಪೇಟೆ,**
**ಬೆಂಗಳೂರು ಸಿಟಿ.**

---

ಕ್ರೌನ್ ಪುಟ ೫೬; **ಕಾವ್ಯರತ್ನಾಕರ.** ಬೆಲೆ ೫ ಆ

**ಪುತ್ತೂರಿನ (ದ. ಕ ) ಶ್ರೀ ಉಗ್ರಾಣ ಮಂಗೇಶರಾಯರು ಕನಕದಾಸ, ಪು ರಂದರದಾಸ, ರಾಘವಾಂಕ, ಸಂಚಿಯ ಹೊನ್ನಮ್ಮ, ಕವಿ ಕುಂಜರ ಮುಂತಾ ಪ್ರಾಚೀನ ಕವಿಗಳ ಕವಿತೆಗಳನ್ನೂ ಕೆಲವು ಹೊಸ ಕವಿತೆಗಳನ್ನೂ ಸಂಗ್ರ ಪಾಠಶಾಲೆಯ ಬಾಲರ ಪಾಠಪುಸ್ತಕವಾಗುವಂತೆ ರಚಿಸಿರುವರು. ಕವಿತೆಗ ಸುಲಲಿತವಾಗಿವೆ. ಓದುವವರಿಗೆ ಹಳೆಗನ್ನಡ ಹೊಸಗನ್ನಡ ಕವಿತೆಗಳ ಜ ರಚನೆ, ಲಾಲಿತ್ಯ ಮುಂತಾದವುಗಳನ್ನು ತುಲನೆ ಮಾಡಿನೋಡಿ ವಿನೋದ ಹೊಂ ಅನುಕೂಲವಾಗುವಂತಿದೆ. ಶ್ರೀ. ಉ. ಮಂಗೇಶರಾಯರ ಈ ತರದ ಪ್ರಯತ್ನ** [illegible]

# ಕರ್ನಾಟಕ ಹಿತೈಷಿಣೀ ಗ್ರಂಥಮಾಲೆ-ಸಚಿತ್ರ

ಉದಾತ್ತವಾದ ನೈತಿಕ ತತ್ವಗಳನ್ನು ಸುಲಭವಾದ ಐತಿಹಾಸಿಕ ಹಾ ಪೌರಾಣಿಕ ಕಥೆಗಳ ರೂಪದಿಂದ ಬರೆದು ಅಲ್ಲಲ್ಲಿಗೆ ಮನೋಹರವಾದ ಚಿತ್ರಗ ನ್ನು ಸೇರಿಸಿ ಆರಾರು ತಿಂಗಳಿಗೊಂದರಂತೆ ಪ್ರತಿವರ್ಷ ಎರಡು ಸರ್ವಾಂಗ ಸುಂ ರವಾದ ಗ್ರಂಥಗಳನ್ನು ಪ್ರಕಟಿಸುವೆವು. ಗ್ರಂಥಮಾಲೆಯ ಕಾಯಂ ವರ್ಗ ದಾರರಿಗೆ ಎಲ್ಲ ಗ್ರಂಥಗಳನ್ನು $\frac{3}{4}$ ಬೆಲೆಗೆ ಕೊಡುವೆವು. ಅಂಥವರು ಮಾಲೆಯ ಪ್ರಕಟವಾಗುವ ಎಲ್ಲ ಗ್ರಂಥಗಳನ್ನು ಕೊಂಡುಕೊಳ್ಳುವೆವೆಂದು ಒಪ್ಪಿಕೊಂ ಎಂಟಾಣೆ ಪ್ರವೇಶ ಫೀಯನ್ನು ಕೊಟ್ಟು ತಮ್ಮ ಹೆಸರನ್ನು ರಜಿಸ್ಟರ ಮಾಡಿಸಿಕೊ ಳ್ಳಬೇಕಾಗುವುದು. ಇಂದಿನ ವರೆಗೆ ಪ್ರಕಟಿಸಲ್ಪಟ್ಟ ಗ್ರಂಥಗಳು:—

(೧) ಸಾವಿತ್ರೀಸತ್ಯವಾನ--ದ್ವಿತೀಯಮುದ್ರಣ. ಪೌ. ಕಥೆ ೦—೧೨—
(೨) ಪದ್ಮಿನಿ—ಮೂರನೆಯ ಮುದ್ರಣ. ಐತಿಹಾಸಿಕ ಕಥೆ ೦—೧೨—
(೩) ದಾಕ್ಷಾಯಿಣಿ—ದ್ವಿತೀಯ ಮುದ್ರಣ. ಪೌ. ಕಥೆ ೦— ೮—
(೪) ಮಹಾರಾಣಿ ಲಕ್ಷ್ಮೀಬಾಯಿ—ದ್ವಿ. ಮು. ಐ. ಕಥೆ ೦—೧೨—
(೫) ಪಾರ್ವತಿ (ದಾಕ್ಷಾಯಿಣಿಯ ಮುಂದಿನ ಭಾಗ) ೦— ೮—
(೬) ಕವಿತಾ ಕುಸುಮಮಂಜರಿ (ಖಂಡಕಾವ್ಯ) ಪ್ರಥಮಗುಚ್ಛ ೦— ೫—
(೭) ಕವಿತಾ ಕುಸುಮಮಂಜರಿ ,, ದ್ವಿತೀಯಗುಚ್ಛ ೦—೫—
(೮) ಸತ್ಕಥಾ ಕುಸುಮ ಮಂಜರಿ. ದ್ವಿತೀಯ ಗುಚ್ಛ ೦—೪—
(ಶ್ರೀ ಸ್ವಾಮಿ ರಾಮಕೃಷ್ಣ ಪರಮಹಂಸರ ಚಿಕ್ಕ ಕಥೆಗಳು,)
(೯) ಸತ್ಕಥಾ ಕುಸುಮ ಮಂಜರಿ ತೃತೀಯ ಗುಚ್ಛ ೦—೪—

ಪತ್ತೆ:— ವ್ಯವಸ್ಥಾಪಕ—ಶ್ರೀಸರಸ್ವತೀ ಮಂದಿರಮ್
ಧಾರವಾಡ.

---

ಇದನ್ನು ಶ್ರೀ. ಆರ್. ಎಸ್. ಹುಕ್ಕೇರಿಕರ ಇವರು ತಮ್ಮ ಕರ್ನಾವಿ ಮುದ್ರಣಾಲಯದಲ್ಲಿ ಮುದ್ರಿಸಿದರು. ಮತ್ತು ಶ್ರೀ. ಎನ್. ವಿ. ಕುರಡಿಯವ ಧಾರವಾಡದಲ್ಲಿ ಶ್ರೀ. ಸರಸ್ವತೀ ಮಂದಿರದಲ್ಲಿ ಪ್ರಕಟಿಸಿದರು.